# ದಕ್ಷಿಣ ಭಾರತದ ಲಂಬಾಣಿಭಾಷೆ ಮತ್ತು ಪ್ರಕೋಶ’

(ಕರ್ನಾಟಕ ಮತ್ತು ಆಂಧ್ರಪ್ರದೇಶಗಳನ್ನು ಅನುಲಕ್ಷಿಸಿ)

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ನಿಬಂಧ

ಸಂಶೋಧಕರು
ಸಂತೋಷ

ಮಾರ್ಗದರ್ಶಕರು
ಡಾ. ಮಾಧವ ಪೆರಾಜೆ
ಪ್ರವಾಚಕರು



ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೮

# 'ದಕ್ಷಿಣ ಭಾರತದ ಲಂಬಾಣಿಭಾಷೆ ಮತ್ತು ಪ್ರಕೋಶ'

(ಕರ್ನಾಟಕ ಮತ್ತು ಆಂಧ್ರಪ್ರದೇಶಗಳನ್ನು ಅನುಲಕ್ಷಿಸಿ)

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ನಿಬಂಧ


ಸಂಶೋಧಕರು
**ಸಂತೋಷ**

ಮಾರ್ಗದರ್ಶಕರು
**ಡಾ.ಮಾಧವ ಪೆರಾಜೆ**
ಪ್ರವಾಚಕರು





ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ - ೫೮೩ ೨೭೬
೨೦೦೮

# ಘೋಷಣಾ ಪತ್ರ

**'ದಕ್ಷಿಣ ಭಾರತದ ಲಂಬಾಣಿಭಾಷೆ ಮತ್ತು ಪ್ರಕೋಶ'** (ಕರ್ನಾಟಕ ಮತ್ತು ಆಂಧ್ರಪ್ರದೇಶಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಶೋಧನಾ ನಿಬಂಧವನ್ನು ಡಾ.ಮಾಧವ ಪೆರಾಜೆ, ಪ್ರವಾಚಕರು, ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

22.2.2008

ಸಂತೋಷ
ಸಂಶೋಧಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 22.2. ೨೦೦೮
ಸ್ಥಳ : ವಿದ್ಯಾರಣ್ಯ

# ದೃಢೀಕರಣ

ಶ್ರೀ ಸಂತೋಷ, ಇವರು **'ದಕ್ಷಿಣ ಭಾರತದ ಲಂಬಾಣಿಭಾಷೆ ಮತ್ತು ಪ್ರಕೋಶ'** (ಕರ್ನಾಟಕ ಮತ್ತು ಆಂಧ್ರಪ್ರದೇಶಗಳನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ.ಮಾಧವ ಪೆರಾಜೆ**
ಪ್ರವಾಚಕರು ಮತ್ತು ಮಾರ್ಗದರ್ಶಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : . .೨೦೦೮
ಸ್ಥಳ : ವಿದ್ಯಾರಣ್ಯ

# ಪರಿವಿಡಿ

# ಅಧ್ಯಾಯ - ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಪ್ರಸ್ತಾವನೆ:**

ಲಂಬಾಣಿಗಳು (ಬಂಜಾರ) ಮೂಲತಃ ಉತ್ತರ ಭಾರತದ ರಾಜ ಪುರಾಣದಿಂದ (ರಾಜಸ್ತಾನ) ವ್ಯಾಪಾರ ನಿಮಿತ್ಯ ದಕ್ಷಿಣಕ್ಕೆ ಬಂದು ಪಸರಿಸಿದ್ದಾರೆ. ಇವರು ಸು.೨೦೦ ವರ್ಷಗಳ ಹಿಂದೆ ೧೭ನೇ ಶತಮಾನದಲ್ಲಿ ಮುಸ್ಲಿಂ ಸೇನೆಯ ಜತೆಗೆ ಇಲ್ಲಿಗೆ ಆಗಮಿಸಿದರು ಎಂದು ಚಿದಾನಂದಮೂರ್ತಿ ಅವರ ಅಭಿಪ್ರಾಯ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ ಪಸರಿಸಿರುವ ಈ ಜನ ಭಾರತದಲ್ಲಿ ೫ ಕೋಟಿಗೂ ಮಿಕ್ಕಿದ್ದಾರೆ. ಮೊಘಲ ಸಾಮ್ರಾಜ್ಯದ ಪತನದ ನಂತರ ಈ ಜನಾಂಗ ತಮ್ಮ ವೃತ್ತಿಯಿಂದ ವಂಚಿತರಾಗಿ ಸಮಸ್ಯೆ ಸುಳಿಯಲ್ಲಿಯೇ ಇದ್ದು ಬ್ರಿಟೀಷ ಸರಕಾರದ ವಿರುದ್ದ ಹೊರಾಡಿ ಸೋಲು ಅನುಭವಿಸಿದವರು. ಕ್ರಿ.ಶ.೧೮೫೦ರಲ್ಲಿ ಗೌರ್ನರ ಜನರಲ್ ಡಾಲಹೌಸಿ ಅರಣ್ಯ ಕಾನೂನು ಜಾರಿ ತಂದು ಅರಣ್ಯವನ್ನು ಆಶ್ರಯಿಸಿಕೊಂಡಿದ್ದ ನೂರಾರು ಬುಡಕಟ್ಟುಗಳು ಈ ಕಾನೂನಿನಿಂದ ಸಂಕಷ್ಟಕ್ಕೀಡಾದವು. ನ್ಯಾಯಕ್ಕಾಗಿ ಹೊರಾಡಿದ ಈ ಜನಾಂಗಕ್ಕೆ ಅರಣ್ಯದಿಂದ ಪಲಾಯನ ಮಾಡಿ ಅದರ ಜೊತೆಗೆ ಕ್ರಿಮಿನಲ್ ಯಾಕ್ಟನ್ನು ಜಾರಿಗೆ ತಂದು ಆರೋಪದ ಪಟ್ಟವನ್ನು ಹೊರಿಸಲಾಯಿತು. ದೇಶದ ಬೇರೆ ಬೇರೆ ಭಾಗಗಳಲ್ಲಿ ಇವರನ್ನು ಬಂಜಾರಾ, ಬಂಜಾರಿ, ಲಂಬಾಣಿ, ಲಂಬಾಡಿ, ಸುಕಾಲಿ, ಮಥುರಾ, ಲಭಾನ, ಭಾಜಿಗರ, ಸಿಂಕಿಬಂದ, ಬೀಜವಾನೆ, ಧನಕೂಟಾ, ಗುವಾರಿಯಾ, ಲೋಬಾನಾ, ಲಮಾಣ, ಸಿಂಗಾಡಿಯಾ ಮುಂತಾದ ಹೆಸರುಗಳಿಂದ ಗುರುತಿಸುತ್ತಾರೆ.

ಗ್ರಾಮಗಳಿಂದ ದೂರದಲ್ಲಿ ವಾಸಿಸುವ ಇವರು ತಮ್ಮ ವಾಸಸ್ಥಾನಗಳಿಗೆ ತಾಂಡೊ (ತಾಂಡ) ಎಂದು ಕರೆದುಕೊಳ್ಳುತ್ತಾರೆ. ಗ್ರಾಮಗಳಿಂದ ದೂರದಲ್ಲಿ ಪ್ರತ್ಯೇಕವಾಗಿಯೇ ವಾಸಿಸುವ ಈ ಜನರು ಪ್ರತ್ಯೇಕವಾದ ಸಂಸ್ಕೃತಿಯನ್ನು ಹೊಂದಿದ್ದಾರೆ. ಪ್ರಾದೇಶಿಕ, ಸಾಂಸ್ಕೃತಿಕ, ಪ್ರಭಾವಕ್ಕೆ ಒಳಗಾಗಿದ್ದರೂ ತನ್ನದೇ ಆದ ವಿಶಿಷ್ಟತೆ ಹಾಗೂ ಪರಂಪರೆಗಳನ್ನು ಉಳಿಸಿಕೊಂಡು ಬಂದವರಾಗಿದ್ದಾರೆ. ಗ್ರಾಮ ನಗರಗಳಿಂದ ದೂರವಿರುವ ಇವರು ನಾಗರಿಕತೆಯಿಂದ ದೂರವಾಗಿ ಉಳಿದಿಲ್ಲ.

ಪ್ರಸ್ತುತ ಅಧ್ಯಯನಕ್ಕೆ ಬೇಕಾದ ಆಕರಗಳ ಸಂಗ್ರಹಣೆ, ಬೇಕಾದ ಮಾಹಿತಿಗಳನ್ನು ಈ ಜನಾಂಗಕ್ಕೆ ಸೇರಿದ ಅನೇಕ ಹಿರಿಯರಿಂದ ಹಾಗೂ ವೃದ್ದರಿಂದ ಪಡೆಯಲಾಗಿದೆ. ತಲೆ-ತಲೆ ಮಾರುಗಳಿಂದ ಬಳಕೆಯಲ್ಲಿರುವ ಸಾಂಸ್ಕೃತಿಕ

ಪದಗಳನ್ನು ಸಂಗ್ರಹಿಸಿ ಭಾಷಿಕ ಅಧ್ಯಯನವೇ ಅಧ್ಯಯನ ವಿಷಯದ ಕೇಂದ್ರವಾಗಿದ್ದು, ಅವರನ್ನು ಸಂದರ್ಶಿಸಿ ಸಂಶೋಧನೆಗೆ ಮಾಹಿತಿಗಳನ್ನು ದಾಖಲಿಸಿಕೊಂಡಿರುವುದು ಮಹತ್ವಪೂರ್ಣವಾಗಿದೆ. ಹೀಗೆ ಸಂಗ್ರಹಿಸಿದ ಪದಗಳನ್ನು ಭಾಷಿಕವಾಗಿ ಸಮನ್ವಯ ಗೊಳಿಸುವುದರ ಮೂಲಕ ಅಧ್ಯಯನ ಮಾಡಲಾಗುವುದು.

ದಕ್ಷಿಣ ಭಾರದ ರಾಜ್ಯಗಳಾದ ಕರ್ನಾಟಕ ಮತ್ತು ಆಂಧ್ರಪ್ರದೇಶವನ್ನು ಆಯ್ಕೆ ಮಾಡಿಕೊಂಡು ಕ್ಷೇತ್ರಕಾರ್ಯದ ಮೂಲಕ ದೊರೆತ ಮಾಹಿತಿಗಳನ್ನು ಕಲೆಹಾಕಿ ಭಾಷಿಕ ವ್ಯಾಕರಣಾತ್ಮಕವಾಗಿ ಅಧ್ಯಯನ ಮಾಡಲಾಗುವುದು.

ಯಾವುದೇ ಒಂದು ಭಾಷೆಗೆ ಲಿಪಿ ಅತ್ಯಗತ್ಯ. ಲಿಪಿ ಇಲ್ಲದಂತಹ ಭಾಷೆಗಳನ್ನು ಅರ್ಥಮಾಡಿಕೊಂಡು ಅವುಗಳನ್ನು ತಮ್ಮ ಭಾಷೆಗೆ ಅನುವಾದಿಸುವುದು ಸಂಶೋದಿಸುವುದು ಸಂಶೋಧಕನಿಗೆ ಬಹಳ ಪ್ರಯಾಸದ ಕೆಲಸವಾಗುತ್ತದೆ. ಕೆಲವು ಸಂದರ್ಭಗಳಲ್ಲಿ ವಕ್ತೃರ ಮಾತುಗಳನ್ನು ಬಿಡಿಸಿ ವಿಶ್ಲೇಷಣೆ ಮಾಡುವುದು ಕಷ್ಟದ ಕೆಲಸ. ಆದರೂ ಹಿರಿಯರು ಹೇಳುವಂತಹ ಪದಗಳನ್ನು ಬಹಳ ಜಾಗರೂಕತೆಯಿಂದ ಕೇಳಿ ತಿಳಿದುಕೊಂಡು ಅದರ ಅಂತರಾಳದ ಅರ್ಥವನ್ನು ಗ್ರಹಿಸಿ ವಿವರಣಾತ್ಮಕ ರೀತಿಯಲ್ಲಿ ವಿಶ್ಲೇಷಣೆ ಮಾಡುವ ಕಾರ್ಯವನ್ನು ಕೈಗೊಳ್ಳಲಾಗಿದೆ.

ನಾಗರೀಕತೆಯ ಹೆಸರಿನಲ್ಲಿ ಬುಡಕಟ್ಟಿನಲ್ಲಿನ ಸಾಕಷ್ಟು ಸಾಂಸ್ಕೃತಿಕ ಪದಗಳು ನಶಿಸಿ ಹೋಗಿವೆ ಮತ್ತು ನಶಿಸುವ ಸ್ಥಿತಿಯಲ್ಲಿವೆ. ಅಂತೆಯೇ ಲಂಬಾಣಿ ಸಮುದಾಯವು ಸಹ ಇದಕ್ಕೆ ಹೊರತಾಗಿಲ್ಲ. ಆದ್ದರಿಂದ ಇವರ ಸಂಪ್ರದಾಯ, ಆಚಾರ-ವಿಚಾರ, ಸಾಂಸ್ಕೃತಿಕ ಜೀವನಕ್ಕೆ ನಿತ್ಯ ಬಳಕೆಯಲ್ಲಿರುವ ಪದಕೋಶ ಸಂಗ್ರಹಿಸಲಾಗಿದೆ. ಅದನ್ನು ಪ್ರಬಂಧದ ಕೊನೆಯಲ್ಲಿ ಕೊಡಲಾಗುವುದು. ಸಂಗ್ರಹಿಸಿ ಸಂರಕ್ಷಣೆ ಮಾಡಿದ್ದೇ ಇದ್ದಲ್ಲಿ ಅವು ಲಂಬಾಣಿಗರ ಇತಿಹಾಸದ ಪುಟಗಳಿಂದ ಮರೆಯಾಗುತ್ತವೆ. ಆದುದರಿಂದ ಈ ರೀತಿಯ ಅಧ್ಯಯನಗಳ ಮುಖಾಂತರ ಇತಿಹಾಸದ ಪುಟಗಳಲ್ಲಿ ಶ್ರೀಮಂತ ಸಾಂಸ್ಕೃತಿಕ ಕೊಡಗೆಗಳಾಗಿ ಉಳಿದು ಕೊಳ್ಳುವುದರಲ್ಲಿ ಯಾವುದೇ ಸಂಶಯವಿಲ್ಲವೆನ್ನಬಹುದು. ಹೀಗಾಗಿ ಪ್ರಸ್ತುತ ಅಧ್ಯಯನದ ಗುರಿಯೂ ಪ್ರಯೋಜನಕಾರಿಯಾಗುತ್ತದೆ.

■

## ಅಧ್ಯಾಯ - ೨

## ಈವರೆಗಿನ ಅಧ್ಯಯನಗಳ ವಿಮರ್ಶಾತ್ಮಕ ಸಮೀಕ್ಷೆ

೧. ೧೮೭೧ರಲ್ಲಿ **ಅಬ್ಬೆಡೂಬೀಸ್** ರವರು 'ಹಿಂದೂ ಮ್ಯಾನರ್ಸ್ ಕಸ್ಟಂಸ್ ಅಂಡ್ ಸೆರೆಮೊನೀಸ್' ಎಂಬ ಗ್ರಂಥದಲ್ಲಿ ಲಂಬಾಣಿ ಜನಾಂಗವನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ೧೮೯೭ರಲ್ಲಿ ಚನೆಯಾದ ಲ್ಯಾಂಡ್ ಮಾರ್ಕ್ಸ್ ಆಫ್ ಇಂಡಿಯನ್ ಆಂತ್ರೋಪಾಲಜಿ ವೈಲ್ಡ್ ಟ್ರೈಬ್ಸ್ ಆಪ್ ಇಂಡಿಯ ಎಂಬ ಗ್ರಂಥದಲ್ಲಿ ಈ ಜನಾಂಗದ ಭಾಷೆಯ ಬಗೆಗೆ ಅಧ್ಯಯನ ನಡೆಸಿರುವುದನ್ನು ಕಾಣಬಹುದು.

೨. **ಎಡ್ಗರ್ ಥರ್ಸ್ಟನ್** ಮತ್ತು **ರಂಗಾಚಾರಿಯವರು** ಬರೆದಿರುವ 'ಕ್ಯಾಸ್ಟ್ ಆಂಡ್ ಟ್ರೈಬ್ಸ್ ಆಪ್ ಸದರನ್ ಇಂಡಿಯಾ' ಎಂಬ ಗ್ರಂಥದ ನಾಲ್ಕನೇ ಸಂಪುಟದಲ್ಲಿ ಈ ಜನಾಂಗದ ಬಗೆಗೆ ಉತ್ತಮ ಮಾಹಿತಿಯನ್ನು ನೀಡಿದ್ದಾರೆ.

೩. **ಡಾ.ಎಂ. ಚಿದಾನಂದ ಮೂರ್ತಿ**ಯವರು ತಮ್ಮ 'ಸಂಶೋಧನಾ ತರಂಗ' ಎಂಬ ಎರಡನೇ ಸಂಪುಟದಲ್ಲಿ ಲಂಬಾಣಿ ಜನ ಮತ್ತು ಅವರ ಭಾಷೆ ಎಂಬ ಲೇಖನವನ್ನು ಬರೆದಿದ್ದು, ಅದರಲ್ಲಿ ಈ ಜನರ ಹಬ್ಬ ಹರಿದಿನಗಳು, ಧಾರ್ಮಿಕತೆ, ಗಾದೆ, ಸೇವಾಭಾಯ, ಹುನಾಸತ್ತಿಯವರ ಬಗ್ಗೆ ತಿಳಿಸಿದ್ದಾರೆ. ಈ ಲೇಖನವು ಮೌಲಿಕವುಳ್ಳದ್ದಾಗಿದೆ.

೪. **ಹೆಚ್.ವಿ. ನಂಜುಂಡಯ್ಯ** ಮತ್ತು **ಎಲ್.ಕೆ. ಅನಂತಕೃಷ್ಣ ಅಯ್ಯಾರ್** 'ಮೈಸೂರು ಟ್ರೈಬ್ಸ್ ಆಂಡ್ ಕ್ಯಾಸ್ಟಸ್ ವ್ಯಾಲ್ಯಂ - II' ರಲ್ಲಿ ಲಂಬಾಣಿಗಳ ಮೂಲ ಸಾಮಾಜಿಕ, ಸಾಂಸ್ಕೃತಿಕ ವಿಚಾರಗಳ ಬಗ್ಗೆಯೂ ಉತ್ತಮ ಮಾಹಿತಿಯನ್ನು ಒದಗಿಸಿದ್ದಾರೆ. ಸಂಶೋಧಕರಿಗೆ ಈ ಪ್ರಬಂಧವು ಹೆಚ್ಚು ಉಪಯುಕ್ತವಾದ ಆಕರ ಗ್ರಂಥವಾಗಿದೆ.

೫. **ಎನ್. ಬಸವರಾಜ್**ರವರು 'ಲಂಬಾಣಿಗರು ಮತ್ತು ಬಗ್ಗರು' ಎಂಬ ಗ್ರಂಥದಲ್ಲಿ ಲಂಬಾಣಿ ಜನಾಂಗದ ಸಾಂಸ್ಕೃತಿಕ ಇತಿಹಾಸದ ಬಗ್ಗೆ ಹೆಚ್ಚು ಒತ್ತುಕೊಟ್ಟು ಅಧ್ಯಯನವನ್ನು ನಡೆಸಿದ್ದಾರೆ.

೬. **ಹಿ.ಚಿ. ಬೋರಲಿಂಗಯ್ಯ**ನವರು ''ಗಿರಿಜನರ ನಾಡಿಗೆ ಪಯಣ'' ಎಂಬ ಗ್ರಂಥದಲ್ಲಿ ಲಂಬಾಣಿ ಕಲೆ, ನೃತ್ಯ, ಸಂಗೀತ, ಇವುಗಳ ಬಗ್ಗೆ ಸ್ಥೂಲ ಚಿತ್ರಣವನ್ನು ನೀಡಿದ್ದಾರೆ. ಗೊರುರು ಚನ್ನಬಸಪ್ಪನವರ 'ಲಂಬಾಣಿ ಕುಣಿತ' ಎಂಬ ಲೇಖನವು ಇವರ ನೃತ್ಯದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡುತ್ತಾರೆ.

೭. **ಡಬ್ಲೂಕ್ರೂಕ್** ಎ.ಬಿ. ಅವರು 'ಟ್ರೈಬ್ಸ್ ಆಂಡ್ ಕಸ್ಟಂಸ್ ಆಫ್ ದಿ ನಾರ್ತ್ ವೆಸ್ಟ್ರನ್ ಇಂಡಿಯಾ'ದಲ್ಲಿ ದಂಡಿಯ ದಶಕುಮಾರ ಚರಿತೆಯಲ್ಲಿ ಬಂಜಾರ ತಾಂಡದಲ್ಲಿ ನಡೆಯುತಿದ್ದ ಕೋಳಿ ಕಾಳಗದ ಮಾಹಿತಿಯನ್ನು ಒದಗಿಸಿದ್ದಾರೆ. ಕ್ರಿ.ಶ. ೧೬೩೦ ರಲ್ಲಿ ಷಹಜಹಾನನ ವಜೀರನಾದ ಅಸಫಜಾನ್ ಎಂಬುವರು ಕೊಟ್ಟ ತಾಮ್ರ ಶಾಸನವನ್ನು ದಾಖಲಿಸಿದ್ದಾರೆ.

೮. **ಬರಗೂರು ರಾಮಚಂದ್ರಪ್ಪನವರು** ಸಂಪಾದಿಸಿರುವ 'ಉಪಸಂಸ್ಕೃತಿ' ಅಧ್ಯಯನದಲ್ಲಿ ಡಾ.ಡಿ.ಬಿ.ನಾಯಕರವರ ''ಲಂಬಾಣಿ ಸಂಸ್ಕೃತಿ'' ರೂಪ್ಲನಾಯಕ್‌ರವರ ''ರಂಗುರಂಗಿನ ಬಂಜಾರ ಜನಾಂಗ'' ಲಾರೆನ್ಸ್ ಡಿಸೋಜರವರ ''ಲಂಬಾಣೀಸ್'' ಹಾಗೂ ''ಆಚ್‌ಅಕ್ಕಲ್'', ಸೋಮಣ್ಣ ಹೊಂಗಳ್ಳಿ ಸಂಪಾದಿಸಿರುವ ''ಲಂಬಾಣಿ ಜಾನಪದ ಕಥೆಗಳು'' ಹರಿಲಾಲ್ ಪವಾರ್‌ರವರು ಹೊರತಂದಿರುವ ಕಿರು ಹೊತ್ತಿಗೆಗಳಾದ ''ಲಂಬಾಣಿಗಳಲ್ಲಿ ಮದುವೆ ಸಂಪ್ರದಾಯಗಳು'' ಹಾಗೂ ''ಲಂಬಾಣಿಗಳಲ್ಲಿ ಹೋಳಿಹಬ್ಬ'' ಈ ಎಲ್ಲ ಗ್ರಂಥಗಳಲ್ಲಿ ಚಿತ್ರಿಸಿರುವ ಲಂಬಾಣಿ ಸಾಂಸ್ಕೃತಿಕ ಜೀವನವನ್ನು ತಿಳಿಸುವಲ್ಲಿ ಉಪಯುಕ್ತ ಗ್ರಂಥಗಳಾಗಿವೆ.

**II ಸಂಶೋಧನಾ ಗ್ರಂಥಗಳು**

೧೯೯೧ ರಲ್ಲಿ **ಪಿ.ಕೆ. ಖಡೋಬಾರವರು** ''ಕರ್ನಾಟಕದ ಲಂಬಾಣಿಗರು ಒಂದು ಸಾಂಸ್ಕೃತಿಕ ಅಧ್ಯಯನ'' ಎಂಬ ಸಂಶೋಧನಾ ಗ್ರಂಥವನ್ನು ಪ್ರಕಟಿಸಿದ್ದು, ಕರ್ನಾಟಕ ಲಂಬಾಣಿಗಳ ಸಂಸ್ಕೃತಿಯ ಆಚಾರ, ವಿಚಾರ, ನಂಬಿಕೆಗಳ, ನೃತ್ಯ, ಕಲೆ ಮುಂತಾದ ಅಂಶಗಳನ್ನು ಅರಿಯಲೂ ಸಹಾಯ ಮಾಡಿದ್ದಾರೆ.

**೧೯೭೧ ರಲ್ಲಿ ಅಮರಸಿಂಗ್ ರಾಠೋಡ್‌ರವರು** ''ಲಂಬಾಣಿ ಭಾಷೆ ಅದರ ವ್ಯಾಕರಣ ಹಾಗೂ ರಾಜಸ್ಥಾನಿ ಮತ್ತು ಹಿಂದಿಯೊಡನೆ ಅದರ ಸಂಬಂಧ'' ಎಂಬ ಪ್ರಬಂಧದಲ್ಲಿ ಲಿಪಿ ಇಲ್ಲದ ಭಾಷೆಯಾದ ಲಂಬಾಣಿ ಭಾಷೆಗೆ ಮೌಖಿಕ ಸಾಹಿತ್ಯವೇ ಲಿಪಿಕ ಭಾಷೆಯಲ್ಲಿ ಸತ್ವಪೂರ್ಣವಾದುದಾಗಿದೆ ಎಂದು ವಿವರಿಸಿದ್ದಾರೆ. ಈ ಭಾಷೆಯ ವ್ಯಾಕರಣವನ್ನು ಅರ್ಥವತ್ತಾಗಿ ನಿರೂಪಿಸಿ ಆ ಭಾಷೆಯು ರಾಜಸ್ಥಾನಿಯೊಂದಿಗೆ ಯಾವ ರೀತಿಯ ಆಂತರಿಕ ಸಂಬಂಧವಿದೆ ಎಂಬುದರ ಬಗ್ಗೆ ತಿಳಿಸಿದ್ದಾರೆ.

**೧೯೭೫ ರಲ್ಲಿ ಪುಷ್ಪಲತ ರಾಂಪುರೆಯವರು** ''ಬಂಜಾರ ಲೋಗ್ ಗೀತೋಂಕಿ ಸಮಾಜ'' ಎಂಬ ಹಿಂದಿ ಭಾಷೆಯ ಸಂಶೋಧನಾ ಮಹಾಪ್ರಬಂಧವನ್ನು ರಚಿಸಿದ್ದಾರೆ. ಈ ಪ್ರಬಂಧದಲ್ಲಿ ಲಂಬಾಣಿ ಗೀತೆಗಳನ್ನು ಸಂಗ್ರಹಿಸಿ ವ್ಯಾಖ್ಯಾನಿಸಿದ್ದಾರೆ.

**ಬಿ.ಜಿ. ಹಲಬರವರು** ''ಉತ್ತರ ಕರ್ನಾಟಕದ ಲಂಬಾಣಿಗಳಲ್ಲಿ ಆರ್ಥಿಕ ಬದಲಾವಣೆಯ ಸಾಮಾಜಿಕ ಪರಿಣಾಮ'' ಎಂಬ ವಿಷಯದ ಬಗ್ಗೆ ಸಂಶೋಧನೆಯನ್ನು ನಡೆಸಿರುತ್ತಾರೆ. ಲಂಬಾಣಿ ಜನಾಂಗದ ಆರ್ಥಿಕ ಸ್ಥಿತಿಗತಿ ಅಧ್ಯಯನ ನಡೆಸುವ ಸಂಶೋಧಕರಿಗೆ ಈ ಗ್ರಂಥ ಸಹಾಯಕವಾಗಿದ್ದು ಅದರ ಆರ್ಥಿಕ ಬದಲಾವಣೆಯ ಮೇಲೆ ಸಾಮಾಜಿಕ ಪರಿಣಾಮವನ್ನು ಗುರುತಿಸಿದ್ದಾರೆ.

೧೯೮೭ ರಲ್ಲಿ ಶ್ರೀ ವಿ.ಹೆಚ್. ಬಾರಕೇರಿಯವರು ''ಬಿಜಾಪುರ ಜಿಲ್ಲೆಯ ಲಂಬಾಣಿ ಆಡು ಭಾಷೆಯ ವರ್ಣಾತ್ಮಕ ವಿಶ್ಲೇಷಣೆ'' ಎಂಬ ವಿಷಯವನ್ನು ಕುರಿತು ಸಂಶೋಧನೆಯನ್ನು ಮಾಡಿದ್ದಾರೆ. ಈ ಮಹಾ ಪ್ರಬಂಧವು ಭಾಷಾಶಾಸ್ತ್ರದ ವಿಷಯವನ್ನು ಒಳಗೊಂಡಿರುವುದರಿಂದ ಭಾಷಾ ವಿಜ್ಞಾನಿಗಳಿಗೆ ಹೆಚ್ಚು ಉಪಯುಕ್ತ ಪ್ರಬಂಧವಾಗಿದೆ.

ಸಣ್ಣರಾಮರವರು 'ಲಂಬಾಣಿ ಸಂಸ್ಕೃತಿ' ಎಂಬ ಮಹಾಪ್ರಬಂಧ ಲಂಬಾಣಿ ಜನಾಂಗದ ಸ್ಥೂಲ ಚಿತ್ರಣವನ್ನು ನೀಡುವ ಸಂಶೋಧನಾ ಗ್ರಂಥವಾಗಿದೆ. ಈ ಸಂಸ್ಕೃತಿಯನ್ನು ಕುರಿತು ಅಧ್ಯಯನ ನಡೆಸುವ ಸಂಶೋಧಕರಿಗೆ ಈ ಗ್ರಂಥವು ಉಪಯುಕ್ತ ಆಧಾರವಾಗಿದೆ.

ಈ ವರೆಗಿನ ಅಧ್ಯಯನಗಳನ್ನು ಗಮನಿಸಿದರೆ ಲಂಬಾಣಿ ಜನಾಂಗದ ಜೀವನ ವಿಧಾನ ಮತ್ತು ಪರಂಪರೆಯ ಹಿನ್ನೆಲೆಯಲ್ಲಿ ಇಡೀ ಸಮಾಜದ ಚಿತ್ರವನ್ನು ಗುರುತಿಸಲಾಗಿದೆ. ಅವರ ಸಾಮಾಜಿಕ, ಆರ್ಥಿಕ ಮತ್ತು ಕೌಟುಂಬಿಕ ವ್ಯವಸ್ಥೆ, ಊಟೋಪಚಾರಗಳು, ಕಸಬು, ವೇಷಭೂಷಣಗಳು, ಹಬ್ಬ ಹರಿದಿನ, ಜಾತ್ರೆ, ಉತ್ಸವಗಳು, ಧಾರ್ಮಿಕತೆ, ಹಾಗೂ ದೇವತಾರಾಧನೆ, ಜನನ, ಮರಣ, ಮದುವೆ ಮುಂತಾದ ಸಂಸ್ಕಾರಗಳ ಹಿನ್ನೆಲೆಯಲ್ಲಿ ಅವರ ಸಮಗ್ರ ಸಂಸ್ಕೃತಿಯನ್ನು ಎತ್ತಿ ತೋರಿಸಲಾಗಿದೆ. ಲಂಬಾಣಿ ಜನಪದರ ಆಚಾರ-ವಿಚಾರ, ನಂಬಿಕೆ ಹಾಗೂ ಮಾಟ ಮಂತ್ರ ವೈದ್ಯ ಇತ್ಯಾದಿಗಳನ್ನು ವಿವರಿಸಲಾಗಿದೆ. ಹಾಗೆಯೇ ಅವರ ವಿಶಿಷ್ಟವಾದ ಜನಪದ ಕಲೆಗಳನ್ನು ಹಾಗೂ ಜನಪದ ಸಾಹಿತ್ಯ ಪ್ರಕಾರಗಳನ್ನು ಸಂಸ್ಕೃತಿಯ ಹಿನ್ನೆಲೆಯಲ್ಲಿ ಗಮನಿಸಲಾಗಿದೆ. ಇವುಗಳ ಮುಖಾಂತರ ಒಟ್ಟು ಅವರ ಸಂಸ್ಕೃತಿಯ ದರ್ಶನವನ್ನು ಮಾಡಲಾಗಿದೆ.

ಒಟ್ಟಿನಲ್ಲಿ ಲಂಬಾಣಿಗರ ಸಮುದಾಯ ಕುರಿತು ಈ ವರೆಗಿನ ಸಂಶೋಧನಾ ಕಾರ್ಯ ಸಾಂಸ್ಕೃತಿಕವಾಗಿ ಸಮಗ್ರವಾದುದಲ್ಲ. ಅವರ ಸಂಸ್ಕೃತಿಯ ಒಂದೊಂದು ಅಂಶವನ್ನು ಎತ್ತಿಕೊಂಡು ಬಿಡಿ ಬಿಡಿಯಾಗಿ ಪರಿಚಯಾತ್ಮಕವಾಗಿ ಸಂಗ್ರಹ ಕಾರ್ಯ ನಡೆದಿದೆ. ಈ ಜನರ ಭಾಷಿಕ ದೃಷ್ಟಿಯಿಂದ ಸಾಂಸ್ಕೃತಿಕ ಅಧ್ಯಯನವು ನೆಡೆದಿರುವುದಿಲ್ಲ. ಈ ಒಂದು ಕೊರತೆಯು ಕಂಡು ಬರುವುದರಿಂದ ಲಂಬಾಣಿ ಭಾಷೆ ಹಾಗೂ ಕನ್ನಡ ಮತ್ತು ತೆಲುಗಿನ ಪ್ರಭಾವ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದೇ ಈ ನಿಬಂಧದ ಪ್ರಯತ್ನವಾಗಿದೆ.

**ಲಂಬಾಣಿ ಭಾಷೆ :**

ಯಾವುದೇ ಸಮಾಜದ ಸಂಸ್ಕೃತಿ ಅಧ್ಯಯನವೆಂದರೆ ಅದರ ಭಾಷಿಕ ಅಧ್ಯಯನವೇ ಆಗಿರುತ್ತದೆ. ಕಾರಣ ಸಂಸ್ಕೃತಿಗೆ ಸಂಬಂಧಿಸಿದ ಅನೇಕ ಸಮಸ್ಯೆಗಳು ಅವರ ವಿಚಾರಗಳು, ಧ್ಯೆಯೋದ್ದೇಶಗಳು, ರೂಢಿ-ಸಂಪ್ರದಾಯಗಳು ಹಾಗೂ ಜೀವನ ಮೌಲ್ಯಗಳು ಆ ಜನಾಂಗದ ಭಾಷೆಯಲ್ಲಿ ಅಡಕಗೊಂಡಿರುತ್ತವೆ. ಭಾಷೆಯ ಮುಂಖಾಂತವೇ ಅವು ಪ್ರಕಟಗೊಳ್ಳುತ್ತವೆ. ಭಾಷೆ ಹಾಗೂ ಸಂಸ್ಕೃತಿಗಳಲ್ಲಿರುವ ನಿಕಟ ಸಂಬಂಧವನ್ನು ವಿದ್ವಾಂಸರು ಈಗಾಗಲೇ ಸ್ಪಷ್ಟಪಡಿಸಿದ್ದಾರೆ ಒಟ್ಟಿನಲ್ಲಿ ಭಾಷೆಯ ಮೂಲಕ ಆಯಾ ಸಮುದಾಯದ ಸಾಂಸ್ಕೃತಿಕ ಸ್ವರೂಪವನ್ನು ಅಧ್ಯಯನ ಮಾಡಬಹುದು. ಅಂತಹ ಸಮುದಾಯಗಳಲ್ಲಿ ಲಂಬಾಣಿ ಸಮುದಾಯ ಒಂದು. ಲಂಬಾಣಿಗರು ತಮ್ಮನ್ನು ತಾವು ಗೋರಮಾಟಿ, ಗೋರವಟ್, ಗೋರ್, ಗೋರ್‌ಬಂಜಾರ್‌ಗಳೆಂದು ಕರೆದುಕೊಳ್ಳುತ್ತಾರೆ. ಇವರಾಡುವ ಲಂಬಾಣಿ

(ಬಂಜಾರಿ/ಸುಗಾಲಿ/ಲಮಾಣಿ/ಲಂಬಾಣಿ) ಭಾಷೆಯನ್ನು ಅವರು 'ಗೋರ್‌ಬೋಲಿ' ಎಂದು ಕರೆದುಕೊಳ್ಳುತ್ತಾರೆ. ಲಂಬಾಣಿ ಭಾಷೆಗೆ ಯಾವುದೇ ಸ್ವತಂತ್ರವಾದ ಇತಿಹಾಸವಿಲ್ಲ. ಅದು ಆಡು ಭಾಷೆಯಾಗಿದೆ. ಆಯಾ ಪ್ರಾಂತೀಯ ಭಾಷೆಗಳ ಪ್ರಭಾವದಿಂದಾಗಿ ಇದೊಂದು ಸಮ್ಮಿಶ್ರ ಭಾಷೆಯಾಗಿ ಪರಿಣಮಿಸಿದೆ. ಗೋರ್‌ಬೋಲಿ ಭಾಷೆಯು ವಸ್ತುನಿಷ್ಠವಾಗಿ ಅದೊಂದು ಇಂಡೋ-ಆರ್ಯನ್ ವರ್ಗಕ್ಕೆ ಸೇರಿದ ಭಾಷೆಯಾಗಿರುವುದು ಸ್ಪಷ್ಟ. ಏಕೆಂದರೆ ಅವರು ಬಳಸುವ ದಿನ ಬಳಕೆಯ ಪದಗಳೆಲ್ಲ ಇಂಡೋ-ಆರ್ಯನ್ ಪದಗಳೇ ಆಗಿವೆ. ಇಂಡೋ ಆರ್ಯನ್ ವರ್ಗಕ್ಕೆ ಸೇರಿದ ಹಿಂದಿ, ಸಂಸ್ಕೃತ ಭಾಷೆಗಳು ಇದಕ್ಕೆ ಪ್ರೇರಕಗಳಾಗಿವೆ. ಗೋರ್‌ಬೋಲಿ ಭಾಷೆಯು ಇಂಡೋ-ಆರ್ಯನ್ ಭಾಷೆ ಎನ್ನುವುದಕ್ಕೆ ಕೆಲವು ಪದಗಳು ನಿದರ್ಶನಗಳಾಗಿ ಅಧ್ಯಾಯ ಎರಡರಲ್ಲಿ ನೀಡಲಾಗಿದೆ. ಆ ಪದಗಳು ಅವರಲ್ಲಿ ಲಭ್ಯವಾಗುವುದರಿಂದ 'ಗೋರ್‌ಬೋಲಿ' ಭಾಷೆಯು ತನ್ನ ಮೂಲರೂಪವನ್ನು ಬೆಳೆಸಿಕೊಂಡು ಬಂದಿದೆ ಎನ್ನುವುದರಲ್ಲಿ ಸಂದೇಹವಿಲ್ಲ.

**ಅಧ್ಯಯನದ ಉದ್ದೇಶ:**

ಲಂಬಾಣಿ ಭಾಷೆ ಕುರಿತಂತೆ ಇದುವರೆಗೆ ಸಮಗ್ರವಾದ ಅಧ್ಯಯನಗಳು ನಡೆದಿಲ್ಲ. ಇಡಿ-ಬಿಡಿ ಬರಹಗಳು ಪ್ರಕಟಗೊಂಡಿವೆ. ಲಂಬಾಣಿ ಭಾಷೆಯ ಧ್ವನಿಮಾಗಳು, ಉಚ್ಚಾರಣಾ ವಿಧಾನ ಹಾಗೂ ವ್ಯಾಕರಣದ ದೃಷ್ಟಿಯಿಂದ ಇದು ಸಂಸ್ಕೃತ, ಪ್ರಾಕೃತ ಭಾಷೆಗಳ ಪ್ರಭಾವಕ್ಕೆ ಒಳಗಾಗಿದ್ದು, ಇವುಗಳ ಜೊತೆಗೆ ದಕ್ಷಿಣ ಭಾರತದ ಪಂಚದ್ರಾವಿಡ ಭಾಷೆಗಳಲ್ಲಾದ ಕನ್ನಡ ಮತ್ತು ತೆಲುಗು ಭಾಷೆಗಳ ಪ್ರಭಾವ ಕುರಿತು ಈ ನಿಬಂಧದಲ್ಲಿ ಚರ್ಚಿಸಲಾಗುವುದು. ಒಟ್ಟಾರೆಯಾಗಿ ಭಾಷಾ ಶಾಸ್ತ್ರೀಯ ನೆಲೆಯಲ್ಲಿ ಸಮಗ್ರವಾಗಿ ಅಧ್ಯಯನ ಮಾಡುವ ಪ್ರಯತ್ನ ಇದುವರೆಗೂ ನಡೆದಿಲ್ಲ. ಇದುವರೆಗಿನ ಅಧ್ಯಯನಗಳು ಲಂಬಾಣಿಗರ ಜನಪದ ಸಂಸ್ಕೃತಿಯನ್ನು ಕುರಿತ ಅಧ್ಯಯನಗಳಾಗಿವೆ. ಆದುದರಿಂದ ಅಂತಹ ಕೊರತೆಯನ್ನು ತುಂಬಿಸುವುದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

**ಅಧ್ಯಯನದ ವ್ಯಾಪ್ತಿ:**

ಈ ಉದ್ದೇಶದಿಂದ ಪ್ರಸ್ತುತ ನಿಬಂಧದಲ್ಲಿ ಲಂಬಾಣಿ ಭಾಷೆ ಬಗ್ಗೆ ಅಧ್ಯಯನ ಮಾಡಲಾಗುವುದು. ಮುಖ್ಯವಾಗಿ ಕರ್ನಾಟಕ ಮತ್ತು ಆಂಧ್ರಪ್ರದೇಶದ ಕೆಲವು ಜಿಲ್ಲೆಗಳು ಆಯ್ದುಕೊಳ್ಳಲಾಗಿದೆ. ಕರ್ನಾಟಕದಲ್ಲಿ ಅತಿಹೆಚ್ಚು ವಾಸವಾಗಿರುವ ಲಂಬಾಣಿಗಳು ಗುರುತಿಸುವ ಜಿಲ್ಲೆಗಳೆಂದರೆ ಗುಲಬರ್ಗಾ, ಬಿಜಾಪುರ, ಬಳ್ಳಾರಿ, ಚಿತ್ರದುರ್ಗ, ಧಾರವಾಡ ಈ ಐದು ಜಿಲ್ಲೆಗಳು ಮತ್ತು ಆಂಧ್ರ ಪ್ರದೇಶದ ತೆಲಂಗಾಣ, ರಾಯಲಸೀಮೆ, ಅನಂತಪುರ, ಜಹೀರಾಬಾದ್ ಈ ಜಿಲ್ಲೆಗಳು ಈ ಅಧ್ಯಯನದ ವ್ಯಾಪ್ತಿಯಲ್ಲಿ ಬರುತ್ತವೆ. ಈ ಜಿಲ್ಲೆಗಳಲ್ಲಿ ವಾಸವಾಗಿರುವ ಲಂಬಾಣಿಗರ ಭಾಷಿಕ ಅಧ್ಯಯನ ಮಾಡಲಾಗಿದೆ.

■

## ಅಧ್ಯಾಯ - ೩

# ಲಂಬಾಣಿ ಸಮುದಾಯ: ಮೂಲ, ವಲಸೆ, ಪ್ರಸರಣ

ತಮ್ಮದೇ ಆದ ಭಾಷೆ ಹಾಗೂ ಸಂಸ್ಕೃತಿಯನ್ನು ಹೊಂದಿರುವ ಅನೇಕ ಬುಡಕಟ್ಟು ಸಮುದಾಯಗಳು ಭಾರತ ದೇಶದಲ್ಲಿ ವಾಸವಾಗಿದ್ದಾರೆ. ಅದರಲ್ಲಿ ಲಂಬಾಣಿ ಸಮುದಾಯ ಒಂದು. 'ಲಂಬಾಣಿ' ಪದದ ಉಗಮದ ಕುರಿತು ಹೇಳುವುದಾದರೆ ಭಾರತದಾದ್ಯಂತ ಹರಡಿರುವ ಲಂಬಾಣಿಗಳೆಲ್ಲರೂ ಒಂದೇ ಬುಡಕಟ್ಟು ವರ್ಗಕ್ಕೆ ಸೇರಿದ್ದರೂ, ವಿವಿಧ ರಾಜ್ಯಗಳಲ್ಲಿ ವಿವಿಧ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಇವರನ್ನು ಸುಮಾರು ೩೦ಕ್ಕೂ ಹೆಚ್ಚು ಪರ್ಯಾಯ ಹೆಸರುಗಳಿಂದ ಗುರ್ತಿಸಲಾಗಿದೆ. ಅವುಗಳೆಂದರೆ ಬಂಜಾರ, ಬಂಜಾರೆ, ಬಂಜಾರಿ, ಬನಜಾರ, ಬಣಜಾರ, ಲಭನ, ಲಭಾನಿ, ಲಂಬಾಂಡ, ಲಂಬಾಡಿ, ಲಮಾಣಿ, ಲಂಬಾಣಿ, ಲಮಾನ ಬ್ರಜವಾಸಿ, ಗಾವಾಲ ಗಮಳಿಯ (ಗಾವರಿಯ) ಗವಾರಿಯ, ಗೌರಿಯ, (ಗವಾರಾ) ಸುಗಾಲಿ, ಲದೇಣಿಯ, ಬಳದಿಯ, ಲೋಭಾವ, (ಲಭಾನ) ಶಿರಾಕಿವಾಲ, ಶಿಂಗಾಡೆ, ಬಂಜಾರಿ, ಶಿರಕಿಬಂದ, ಬಾಣದ ಕಂಗಸಿಯಾ (ಕಂಗಿ, ವಂಝಾರ, ಚರಣ್, ನಟ್) ಹೀಗೆಯೇ ಅಲ್ಲದೆ ಇವರು ತಮ್ಮನ್ನು ತಾವು ''ಗೋರ್‌ಭಾಯಿ'' ಗೋರ್‌ಮಾಟಿ, ಗೋರ್‌ವಟ್ ಗಳೆಂಬುದಾಗಿ ಕರೆದುಕೊಳ್ಳುವುದುಂಟು.[೧]

ಭಾರತದಾದ್ಯಂತ ಇವರಿಗೆ ವಿವಿಧ ಹೆಸರುಗಳಿಂದ ಗುರ್ತಿಸಲು ಬಂಜಾರ ಅಥವಾ ಲಂಬಾಣಿ ಪದದ ಮೇಲೆ ವಿವಿಧ ಪ್ರಾದೇಶಿಕ ಭಾಷೆಗಳ ಪ್ರಭಾವ ಹಾಗೂ ಕಾಲಕ್ಕೆ ತಕ್ಕಂತೆ ಇವರ ವೃತ್ತಿಯಲ್ಲಾದ ಬದಲಾವಣೆಯೇ ಇದಕ್ಕೆ ಕಾರಣ ಎಂಬುದಾಗಿ ಹೇಳಬಹುದು. ಮೂಲದಲ್ಲಿ 'ಲವಣ' ಹಾಗೂ ಇತರ ಖಾದ್ಯ ಪದಾರ್ಥಗಳ ವ್ಯಾಪಾರವನ್ನು ಕೈಗೊಂಡು ಉತ್ತರದಿಂದ ದಕ್ಷಿಣಕ್ಕೆ ಪಸರಿಸಿದ ಇವರು ಬಂಜಾರ ಹಾಗೂ ಲಂಬಾಣಿ, ಲಮಾಣಿ, ಸುಗಾಲಿ ಎಂಬ ಕೆಲವೇ ಕೆಲವು ಹೆಸರುಗಳಿಂದ ಕರೆಯಲ್ಪಟ್ಟರು.''[೨] ೧೯ನೇ ಶತಮಾನದಲ್ಲಿ ಬ್ರಿಟಿಷರ ಆಗಮನದಿಂದ ಸಾರಿಗೆ ವ್ಯವಸ್ಥೆಯಲ್ಲಿ ಮಹತ್ತರ ಬದಲಾವಣೆಯಾಗಿ ರೈಲುಯುಗ ಆರಂಭವಾಯಿತು. ಇದರಿಂದ ಇವರ ಮೂಲ ವೃತ್ತಿಯಾದ ವ್ಯಾಪಾರ ಸಾಗಣೆ, ಇತ್ಯಾದಿ ವೃತ್ತಿಗಳನ್ನು ಕೈಬಿಟ್ಟು ಇತರ ಉಪ-ಕಸುಬುಗಳಿಗೆ ವರ್ಗಾಯಿಸಲ್ಪಟ್ಟರು. ಹೀಗಾಗಿ ಈ ಜನರು ಕಾಲಾನಂತರದಲ್ಲಿ ''ಆಯಾ ವೃತ್ತಿಗಳನ್ನಾಧರಿಸಿ ವಿವಿಧ ಹೆಸರುಗಳಿಂದ ಸಂಭೋಧಿಸಲ್ಪಟ್ಟರು. ಅಲ್ಲದೆ ಪ್ರಾಂತೀಯ ಭಾಷೆಗಳ ಪ್ರಭಾವದಿಂದ ಪದದ ಉಚ್ಚಾರಣೆಯಲ್ಲಾದ ಬದಲಾವಣೆಯೇ ಇದಕ್ಕೆ ಕಾರಣವಾಯಿತು.''[೩]

**ಲಂಬಾಣಿಗಳು:**

ಬಂಜಾರರನ್ನು ಕರ್ನಾಟಕದಲ್ಲಿ ಲಂಬಾಣಿಗಳೆಂದು ಸಂಭೋಧಿಸುತ್ತಾರೆ. ಈ ಪದದ ಉಚ್ಛಾರದ ಬಗ್ಗೆ ವಿದ್ವಾಂಸರು ಹಲವಾರು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಬಾಂಬೆ ಗೆಜೆಟಿಯರ್ ಪ್ರಕಾರ ''Lambanies are also Known as 'LAVANAS' or 'LAMBADIES' in karnataka the term lambani is derived from lavanga, meaning salt, the tribe being the chief carriers of salt before the opening of carf roads and railways. It is also said that they are called Lavsnas because They were born in the dynasty of Lava.'' [೪]

ಅದೇ ರೀತಿಯಾಗಿ **ಹೆಚ್.ವಿ. ನಂಜುಂಡಯ್ಯ** ಮತ್ತು **ಎಲ್.ಕೆ. ಅನಂತಕೃಷ್ಣ ಅಯ್ಯರ್** ರವರು ಹೇಳುವಂತೆ, ''The word 'LABHAN' is said by some to be the alternative from of lavan, meaning salt, the labhans. being salt carriers''[೫]

ಇವರಲ್ಲಿನ ಒಂದು ಪ್ರಮುಖ ಉಪಜಾತಿಯಾದ ಲಂಬಾಣಿ ಎನ್ನುವ ಪದವನ್ನು ಇಡೀ ಬುಡಕಟ್ಟು ಜನಾಂಗಕ್ಕೆ ಅನ್ವಯವಾಗುವಂತೆ ಕರೆಯಲಾಗುತ್ತದೆ. 'ಲಂಬಾಣಿ' ಎನ್ನುವ ಪದವು ಹಲವು ಮಾರ್ಪಾಡುಗಳಿಂದ ಬಂಜಾರಿ, ಬ್ರಿಂಜಾರಿ, ಲಮಾಣಿ, ಲಬಾನಿ, ಲಂಬಂಕಿ, ಲಬನ, ಲಂಬಾಡಿ, ಮತ್ತು ಲಂಬಾಣಿ ಎಂಬುದಾಗಿ ಕರೆಯಲ್ಪಡುತ್ತದೆ.[೬] ಲಂಬಾಣಿ ಎಂಬ ಪದವು ಸಂಸ್ಕೃತ ಪದವಾದ 'ಲವಣ'ದಿಂದ ಉದ್ಭವಿಸಿದ್ದು ಎಂಬುದರ ಬಗ್ಗೆ ತಮ್ಮ ಅಸಮ್ಮತವನ್ನು ವ್ಯಕ್ತಪಡಿಸುವ ಖ್ಯಾತ ಸಮಾಜ ವಿಜ್ಞಾನಿ **ಎಡ್ಗರ್ ಥರ್ಸ್‌ಟನ್**‌ರವರು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ. The derivation of Labhani or Labani etc., is obscure, if has been suggested that it means salt carrier from the sanskrit Lavana, ''salt, because the tribe carried salt but this explanation goes against several phonetic rules and does not account of the froms of word like Labhani or Labani''[೭] ಆದರೂ ಇದನ್ನು ಹೊರತುಪಡಿಸಿ ಇರಬಹುದಾದ ಅರ್ಥವನ್ನು ತರ್ಕಬದ್ಧವಾಗಿ ನೀಡದೆ ಇರುವುದರಿಂದ, ಬೇರೆ ಪರ್ಯಾಯವಿಲ್ಲದೆ ಮೇಲಿನ ಅಭಿಪ್ರಾಯಕ್ಕೆ ಹೆಚ್ಚು ಮನ್ನಣೆಯನ್ನು ನೀಡಬೇಕಾಗಿದೆ. ಸಮುದ್ರ ತೀರದಿಂದ ಲವಣವನ್ನು ತಮ್ಮ ರಾಸುಗಳ ಮೇಲೆ ಹೇರಿಕೊಂಡು ಒಳನಾಡು ಪ್ರದೇಶಗಳಲ್ಲಿ ಬಯಲು ಸೀಮೆಗಳಲ್ಲಿ ಘಟ್ಟ ಪ್ರಾಂತ್ಯಗಳು ಹಾಗೂ ನಾಡಿನಾದ್ಯಂತ ವ್ಯಾಪಾರ ಕೈಗೊಂಡದ್ದರಿಂದ ಆ ವೃತ್ತಿಯನ್ನೇ ಆಧರಿಸಿ ಈ ಜನರಿಗೆ ಕರ್ನಾಟಕ, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರಗಳಲ್ಲಿ ಲವಾಣಿಗರು, ಲಮಾಣಿಗರು, ಲಂಬಾಣಿಗಳು, ಲಂಬಾಡಿಗಳು, ಎಂಬ ಹೆಸರುಗಳಿಂದ ಕರೆಯುತ್ತಿದ್ದರು.[೮]

**ಮೂಲ:** ಇವರ ಹೆಸರು ಇವರ ಮೂಲಸ್ಥಾನವನ್ನು ಕುರಿತು ಬಂದಿರಬಹುದಾದ ಒಂದು ಅಂಶವಾಗಿರಬಹುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ, ಸಂಶೋಧಕರಾದ ಸಣ್ಣರಾಮರವರು ಹೀಗೆ ವಿವರಿಸುತ್ತಾರೆ. ರಾಜಸ್ಥಾನದಲ್ಲಿ 'ಲವಾನಿ' ಎಂಬ ಹೆಸರಿನ ಪ್ರದೇಶವೊಂದು **ಮಾಂಡು**ವಿನ ಸಮೀಪದಲ್ಲಿತ್ತೆಂಬುದು ಚರಿತ್ರೆಯಿಂದ ತಿಳಿದು ಬರುತ್ತದೆ. ಲಂಬಾಣಿಗಳು ರಾಜಸ್ಥಾನದ ಮೂಲದವರೆಂಬುದು ನಿರ್ವಿವಾದ. ರಾಜಸ್ಥಾನದಲ್ಲಿರುವ ಲವಾನಿ, ಲಂಬಾಣಿಗಳ

ಮೂಲಸ್ಥಾನವಾಗಿರಬಹುದೇ? ಆದುದರಿಂದ ಅವರಿಗೆ ಲಂಬಾಣಿಗಳೆಂದು ಕರೆಯಬಹುದೇ? ಲವಾನಿ, ಲಂಬಾನಿ, ಲಂಬಾಣಿ, ಆಗಿರಬಹುದೇ.?[೯] ಆದರೂ ಸಂಶೋಧಕ ಕೆಲವಾರು ಸಂಶಯಗಳಿಗೆ ಗುರಿಯಾಗಿದ್ದು, ಅನೇಕ ಪ್ರಶ್ನೆಗಳನ್ನು ಮೂಡಿಸಿಕೊಂಡಿರುವುದು ಅವರ ಅಭಿಪ್ರಾಯಗಳು ವೈಜ್ಞಾನಿಕ ಅಲ್ಲವೆಂಬುವುದರ ಸಂಕೇತವಾಗಿದೆ ಎನ್ನಬಹುದು. ಅವರ ಅರ್ಥವಿವರಣೆ ಅವರಿಗೆ ತೃಪ್ತಿದಾಯಕ ಅಲ್ಲವೆಂಬುವುದೂ ಸ್ಪಷ್ಟವಾಗುತ್ತದೆ. ಅವರ ಪ್ರಶ್ನೆಗಳು ಪ್ರಶ್ನೆಗಳಾಗಿಯೇ ಉಳಿಯುತ್ತವೆ. ಆದರೂ ಮೇಲಿನ ಅಭಿಪ್ರಾಯಗಳನ್ನು ಗಮನಿಸಿದಾಗ ಲಂಬಾಣಿ ಪದದ ಮೂಲವು 'ಉಪ್ಪು' ವ್ಯಾಪಾರ ಮಾಡುತ್ತಿದ್ದುದರಿಂದ ಇವರ ಒಳಪಂಗಡ 'ಲಂಬಾಣಿ' ಎಂಬ ಹೆಸರಿನಿಂದ ಹಾಗೂ ಲವಾನಿ ಎಂಬ ಪ್ರದೇಶದ ಹೆಸರಿನಿಂದ ಬಂದಿರಬಹುದೆಂಬ ವಿಷಯ ತಿಳಿಯುತ್ತದೆ.

ಚರಿತ್ರೆಯ ಪುಟಗಳನ್ನು ತಿರುವಿ ಗಮನಿಸಿದಾಗ ತಿಳಿದು ಬರುವ ವಿಷಯವೆಂದರೆ ವಿದೇಶಿಯರನ್ನು ಆಯಾ ದೇಶದ ಹೆಸರಿನ ಮೇಲೆ ಆಯಾ ಜನಾಂಗವನ್ನು ಸಂಭೋಧಿಸುತ್ತಿದ್ದುದನ್ನು ಕಾಣಬಹುದಾಗಿದೆ. ಉದಾ: ರಷ್ಯಾದವರನ್ನು ರಷ್ಯನ್ನರು, ಜರ್ಮನಿಯರನ್ನು ಜರ್ಮನ್ನರು, ಚೀನಾದವರನ್ನು ಚೀನಿಯರು ಹೀಗೆ ಆಯಾ ಹೆಸರುಗಳಿಂದ ಗುರ್ತಿಸಲ್ಪಡುವುದು ವಾಡಿಕೆ ಮತ್ತು ಸಹಜ. ಹಾಗೆಯೇ ಭಾರತದವರನ್ನು ಭಾರತೀಯರು ಎಂದೂ ಕರೆದರೂ, ಇಲ್ಲಿ ಒಟ್ಟಾರೆಯಾಗಿ ಸಾಂಸ್ಕೃತಿಕವಾಗಿ ರೂಪಿಸಿರುವುದನ್ನು ಕಾಣಬಹುದಾಗಿದೆ. ಭಾರತೀಯ ಸಾಂಸ್ಕೃತಿಕ ದೃಷ್ಟಿಯಲ್ಲಿ ಹೇಳುವುದಾದರೆ ಆಯಾ ಜನಾಂಗದ ಹೆಸರುಗಳನ್ನು ಸ್ಥಳದ ಹೆಸರಿಗಿಂತಲೂ ಹೆಚ್ಚಾಗಿ ಅವರವರ ವೃತ್ತಿಯ ಹಿನ್ನೆಲೆಯಲ್ಲಿ ಗುರ್ತಿಸುವುದನ್ನೂ ಕಾಣಬಹುದು. ಆದುದರಿಂದ 'ಲವಣ' ಅಥವಾ 'ಉಪ್ಪಿನ' ವೃತ್ತಿಯನ್ನು ನಿರ್ವಹಿಸುತ್ತಿದ್ದವರನ್ನು ಲಂಬಾಣಿಗಳೆಂಬುದಾಗಿ ಕರೆದಿರುವುದು ಸತ್ಯಕ್ಕೆ ಸಮೀಪವೆಂದು ಹೇಳಬಹುದು.

**ಬಂಜಾರ:** ಲಂಬಾಣಿಗಳು ಬಂಜಾರರು ಎಂಬ ಹೆಸರಿನಿಂದಲೂ ಕರೆಯಲ್ಪಡುತ್ತಾರೆ. ವಿಶೇಷವಾಗಿ ಈ ಪದವು ಉತ್ತರ ಭಾರತದ ಕಡೆ ಬಳಕೆಯಲ್ಲಿದೆ. ಈ ಪದದ ಬಳಕೆಯನ್ನು ಇವರು ಬಹಳಷ್ಟು ಇಷ್ಟ ಪಡುತ್ತಾರೆ. ಬಂಜಾರ್ ಎಂಬ ಪದದ ಉಗಮವನ್ನು ಕುರಿತಂತೆ ವಿವರಣೆಯನ್ನು ನೀಡುತ್ತಾ ಗ್ರೀಯರ್‌ಸನ್ ಅವರು ಸೈನಿಕರಿಗೆ, ಯುದ್ಧಗಳ ಸಾಮಗ್ರಿ ಮತ್ತು ವಿಶೇಷವಾಗಿ ದವಸಧಾನ್ಯಗಳನ್ನು ಸರಬರಾಜು ಮಾಡುವ ವ್ಯಾಪಾರ ವರ್ಗದವರು ಎಂದು ಅಭಿಪ್ರಾಯ ಪಟ್ಟಿದ್ದಾರೆ. ''A tribe whose primary occupation is or Rather used to be, to act as grain Carriers and Suppliers to armies in the field, their names is derived from the Sanskrit Vanijya or Banijyakara, A merchant.''[೧೦]

ಹಾಗೆಯೇ, ಇವರ ಅಲೆಮಾರಿ ಸ್ವಭಾವವನ್ನು ಕುರಿತಂತೆ ವಿವರಿಸುವ ಪದವು ಇದಾಗಿರಬಹುದೆಂದೂ ವಿವರಿಸುತ್ತಾ ಹೀಗೆ ಹೇಳಲಾಗಿದೆ. ''If may with equal possibility be referred to 'Vanachara' (Sanakrit meaning a wonderer in the Jungle) an account of the nomidic character of the Tribe.''[೧೧]

ಎಡ್ಗರ್ ಥರ್ಸ್‌ಟನ್‌ರವರ ಪ್ರಕಾರ, ''The name Banjara and it's congeners is probably deried from the Sanrit Vanijakarakas, a merchant through the prakrish Vanijaarao trader.''[೧೨]

ಬಂಜಾರರು ಎಂದರೆ ಪಲಾಯನಕಾರರು, ಎಂಬ ಹೊಸ ಅರ್ಥವನ್ನು ನೀಡುವ ಪ್ರಯತ್ನವನ್ನು ಇತಿಹಾಸಕಾರರಾದ K.S.Shing ರವರು ''If is believed that the banjaras were forced to be on move constently to escape forceable conversion to islam at the hands of Aurangjeb's army the word Banjara is derived from panjabi word Banjara meaning to run away.''[೧೩]

ಈ ಅಭಿಪ್ರಾಯ ಚರ್ಚಿಸುವುದಾದರೆ, ಇದು ಹೆಚ್ಚು ಅವೈಜ್ಞಾನಿಕ ಮತ್ತು ಅರ್ಥಹೀನವಾದ ಧೋರಣೆ ಎನಿಸುತ್ತದೆ. ಏಕೆಂದರೆ, ಬಂಜಾರರು ಔರಂಗಜೇಬನ ಸೈನಿಕರ ಬಲತ್ಕಾರಯುತ ಇಸ್ಲಾಂ ಮತಾವಲಂಬನೆಯಿಂದ ತಪ್ಪಿಸಿಕೊಳ್ಳಲು ಸದಾ ಪಲಾಯನ ಮಾಡುತ್ತಿದ್ದರು. ಅಂದರೆ,ಬೇರೆ ಯಾವುದೇ ಜನಾಂಗ ಪಲಾಯನ ಮಾಡದೆ ಇದ್ದಾಗ,ಇದೊಂದೆ ಜನಾಂಗ,ಏಕೆ ಪಲಾಯನ ಮಾಡಿತ್ತು? ಅಲ್ಲದೆ ಈ ಜನಾಂಗವನ್ನಷ್ಟೇ ಬಲತ್ಕಾರಯುತ ಮತಾವಲಂಬನೆಯ ಸೆಳೆತಕ್ಕೆ ಔರಂಗಜೇಬನು ಏಕೆ ಗುರಿಪಡಿಸಿದ? ಎಂಬುದು ಉತ್ತರಿಸಲಾಗದ ಪ್ರಶ್ನೆಯಾಗಿದೆ. ಇದೆಲ್ಲಕ್ಕಿಂತಲೂ, ಮುಖ್ಯವಾದ ವಿಷಯವೆಂದರೆ, ಬಂಜಾರ ಸಮುದಾಯದ ಇತಿಹಾಸ ಮತ್ತು ಪದದ ಬಳಕೆ ಔರಂಗಜೇಬನಿಗಿಂತ ಎಷ್ಟೋ ವರ್ಷಗಳ ಹಿಂದೆ ಬಳಕೆಯಿತು. ಅದನ್ನು ೧೮ನೇ ಶತಮಾನದಷ್ಟು ಕಿರಿಯದಾಗಿಸುವುದು ಸಮಂಜಸವೂ ಅಲ್ಲ. ವೈಜ್ಞಾನಿಕವೂ ಅಲ್ಲ ಎಂದಿದ್ದಾರೆ. ಅಲ್ಲದೇ 'ಬಹಜ್ನ' ಎಂಬ ಪಂಜಾಬಿ ಮೂಲದ ಪದವು ಬಂಜಾರ ಪದಕ್ಕೆ ಮೂಲವಾಗಿದೆ. ಔರಂಗಜೇಬನ ಮತಾಂತರದ ಒತ್ತಡಕ್ಕೆ ಸಿಲುಕಿ ಓಡಿ ಹೋದವರಾದ್ದರಿಂದ ಇವರಿಗೆ 'ಬಂಜಾರ್' ಎಂಬುದಾಗಿ ಕರೆಯಲಾಗಿದೆ. ಎಂಬ ಮಾತು ಕೇವಲ ಕಾಲ್ಪನಿಕವಾಗಿದೆ. ಕಾರಣ ಮೊಗಲರ ಕಾಲದಲ್ಲಿ ಮದ್ದುಗುಂಡು, ಆಹಾರ ಸರಬರಾಜು ಕಾರ್ಯವನ್ನು ನಿರ್ವಹಿಸುತ್ತಿದ್ದು ಬಂಜಾರರು ಎಂಬುದಾಗಿ ಐತಿಹಾಸಿಕ ಅಧ್ಯಯನದಿಂದ ತಿಳಿದು ಬರುತ್ತದೆ. ಹೀಗಾಗಿ ಔರಂಗಜೇಬನು ಬಂಜಾರರನ್ನು ಮತಾಂತರಿಸುವ ಪ್ರಶ್ನೆಯು ಬರುವುದಿಲ್ಲ. ಏಕೆಂದರೆ ಮತಾಂತರಿಸಿ ತಮ್ಮ ಸೈನಿಕರಿಗೆ ದವಸಧಾನ್ಯಗಳ ಕೊರತೆಯನ್ನು ತರಿಸಿಕೊಳ್ಳಲು ಔರಂಗಜೇಬನಿಗೆ ಇಷ್ಟವಿರಲಿಲ್ಲ.

ಈ ಪದದ ಬಳಕೆಯನ್ನು ಅಂಕಿ ಅಂಶಗಳ ಹಿನ್ನೆಲೆಯಲ್ಲಿ ಕಾಣಬಯಸುವ ಪ್ರಯತ್ನವಾಗಿ **ರಂಜಿತ್‌ನಾಯಕ್** ಎಂಬುವರು ಹೀಗೆ ವಿವರಿಸುತ್ತಾರೆ. ಬಣ ಎಂದರೆ **ಗುಂಪು**. ಈ ಜನ ಗುಂಪುಗಳಲ್ಲಿ ವಾಸಿಸುತ್ತಿದ್ದರಿಂದ ಬಣಜಾರ ಎಂದು ಕರೆದಿರಬೇಕು.[೧೪]

ಅವರ ವ್ಯಾಪಾರ ಸ್ವರೂಪವನ್ನು ನೀಡುವ ಪ್ರಯತ್ನವಾಗಿ ''ತಮ್ಮದು ಬಣಜಾರ ಜಾತಿ ಎಂದು ಹೇಳುತ್ತಾರೆ. ಬಣಜಾರ್ ಎಂಬುದು ಅವರು ವರ್ತಕರಾಗಿ ಇಲ್ಲಿಗೆ ಬಂದರೆಂಬುದನ್ನು ಸೂಚಿಸುತ್ತದೆ.'' ಎಂದು ವಿದ್ವಾಂಸರು ವಿವರಿಸಿದ್ದಾರೆ.[೧೫] ವನ + ಚರ = ವನಚರ ಅಂದರೆ ಅಡವಿಯಲ್ಲಿ ಸಂಚರಿಸುವವರು, ಸಂಚಾರಿಗಳಾದ ಲಂಬಾಣಿಗಳು ವ್ಯಾಪಾರಕ್ಕಾಗಿ ತಮ್ಮ ಜಾನುವಾರುಗಳ ಮೇಲೆ ಸಾಮಾನುಗಳನ್ನು ಹೇರಿಕೊಂಡು ಅಡವಿ ಮುಖಾಂತರ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸುತ್ತಿದ್ದುದರಿಂದ ಇವರು ವನಚರ, ವನಚಾರ, ಬನಜಾರ, ಬಣಜಾರ, ಬಂಜಾರ ಎಂದು ಕರೆಯಲ್ಪಟ್ಟರು.[೧೬]

ಮತ್ತೊಂದು ಅಭಿಪ್ರಾಯದಂತೆ, The theory that the tittle of the caste may be connected with the hindi Bon-Jarna in some such sence as barners or cleaners of the jungle or forest wonderers is untechable.[೧೭]

ಮೇಲಿನ ಹೇಳಿಕೆಗಳಿಂದ ಬಂಜಾರ ಪದದ ಉಗಮವು ಮುಖ್ಯವಾಗಿ ಸಂಸ್ಕೃತದ 'ವಣಿಕ' ಹಿಂದಿಯ 'ವನಚರ', ಪರ್ಶಿಯ ಮೂಲದ 'ಬ್ರಂಜಾರ', ಪಂಜಾಬಿ ಮೂಲದ 'ಬಹಜ್ನ', ಈ ನಾಲ್ಕು ಭಾಷೆಯ ಪದಗಳಿಂದ ಉಗಮವಾದುದ್ದಾಗಿದೆ ಎಂಬುದಾಗಿ ತಿಳಿದು ಬರುತ್ತದೆ.

ಪರ್ಶಿಯನ್ ಅರ್ಥವನ್ನು ಸಮಂಜಸ ವಲ್ಲವೆಂದು ಹೇಳವ **ಹೆವೋನ್ಸ್**ರವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ. ''Thise provinces shows that the popular derivation from the persion biranjar or Rice carriers is untechable.''[೧೮]

**ಡಬ್ಲ್ಯೂಕ್ರೋಕ್** ರವರು ಸಂಸ್ಕೃತ ಪದವಾದ ವಾಣಿಜ್ಯ ಅಥವಾ ವಾಣಿಜ್ಯಕಾರ ಎಂಬ ಪದದಿಂದ ಬಣಜಾರ ಎಂಬ ಪದ ಬಂದಿದೆ ಎಂದು ಅಭಿಪ್ರಾಯ ಪಡುತ್ತಾರೆ. ಏಕೆಂದರೆ, ವಾಣಿಕ್ ಎಂಬ ಪದವು ವೇದಗಳ ಕಾಲದಿಂದಲೂ ಬಳಕೆಯಲ್ಲಿದೆ. ''In the Rigveda Dirghasaravas is refered to as a vanik who was in the time of distress lived by trade Vanijja.''[೧೯]

ಈ ಎಲ್ಲಾ ಇತಿಹಾಸತಜ್ಞರ ಹೇಳಿಕೆಯಿಂದ ತಿಳಿದು ಬರುವುದನೆಂದರೆ ಲಂಬಾಣಿಗಳು ದೈನಂದಿನ ಬಳಕೆಯ ದವಸಧಾನ್ಯಗಳನ್ನು ರಾಸುಗಳ ಮೇಲೆ ಹೇರಿಕೊಂಡು ವ್ಯಾಪಾರ ಮಾಡುತ್ತಿದ್ದರಿಂದ 'ವಾಣಿಕ್' ರೆಂದು ಪ್ರಸಿದ್ಧರಾಗಿರಬೇಕು. ಆದುದರಿಂದ **ಕ್ರೋಕ್** ರವರು ಅಭಿಪ್ರಾಯಪಟ್ಟಿರುವ ವಿಶಾಲ ಅರ್ಥಕೊಡುವ ವಾಣಿಜ್ಯಕಾರ ಎಂಬ ಪದವು ಬಣಜಾರ, ಮೂಲ ಪದದ ಉಗಮಕ್ಕೆ ಕಾರಣವಾಗಿದೆ ಎಂಬ ಮಾತು ಅರ್ಥಪೂರ್ಣವಾಗಿದೆ.

**ಸುಕಾಲಿ:** ಕರ್ನಾಟಕ ಮತ್ತು ಆಂಧ್ರದ ಗಡಿಭಾಗಗಳು ಸೇರಿದಂತೆ ದಕ್ಷಿಣ ಭಾರತದ ಕೆಲವು ರಾಜ್ಯಗಳಲ್ಲಿ ಲಂಬಾಣಿಗರನ್ನು 'ಸುಕಾಲಿ'ಗಳು ಎಂಬುದಾಗಿ ಸಂಬೋಧಿಸುತ್ತಾರೆ. ಕೆಲವು ವಿದ್ವಾಂಸರು ಅಭಿಪ್ರಾಯ ಪಡುವಂತೆ, ಸುಕಾಲಿಗಳು ಎಂಬುದು 'ಅಡಿಕೆ' ಎಂಬ ಪದದಿಂದ ಬಂದಿದ್ದು, ಅಡಿಕೆ ವ್ಯಾಪಾರಿಗಳಾದ ಈ ಸುಕಾಲಿಗಳು ನಂತರ ತಮ್ಮ ಕಸುಬಿನ ಆಧಾರದ ಮೇಲೆ ಗುರ್ತಿಸಲ್ಪಟ್ಟಿರೆಂಬುದಾಗಿದೆ. ಅಡಿಕೆ ವ್ಯಾಪಾರಿಗಳನ್ನು **ಸಗಾಲಿ** ಅಥವಾ **ಸುಕಾಲಿ**ಗಳು ಎಂಬುದಾಗಿ ಗುರ್ತಿಸಿರುವುದು ಅವರ ಆರ್ಥಿಕ ಧೋರಣೆಯ ಒಂದು ಅಂಶವಾಗಿದೆ. ವ್ಯಾಪಾರವೇ ಮೂಲ ಕಸುಬಾಗಿದ್ದ ಈ ಜನಾಂಗಕ್ಕೆ ಪದಾರ್ಥಗಳ ವ್ಯಾಪಾರದ ಮೇಲೆ ಗುರ್ತಿಸಿರುವುದು ವಿಶೇಷ. ''It is said by same that it means arecanut being corrapted from the supari.''[೨೦]

ಹಾಗೆಯೇ ಎಡ್ಗ**ರ್‌ಥರ್ಸ್ಟನ್**ರವರು ಹೇಳುವಂತೆ, Sugali or Sukali, by same Sugali is said to be a corraption of Supari (Betelnut) because they for merly traded largely therein.[೨೧]

ತೆಲುಗು ಭಾಷೆಯಲ್ಲಿ ಗೋವುಗಳಿಗೆ 'ಸುಗಾಲಿ' ಎಂದು ಹೆಸರು. 'ಸುಗಾಲಿ' ಎಂದರೆ ದನಕಾಯುವವ ಎಂಬರ್ಥದಲ್ಲಿ ಇವರು ಬೈಗುಳಕ್ಕಾಗಿ ಬಳಸುತ್ತಾರೆ.[೨೨] ಎಂಬ ವಿದ್ವಾಂಸರ ಈ ಮೇಲಿನ ಅಭಿಪ್ರಾಯವು ಸತ್ಯಕ್ಕೆ

ಸನಿಹವಾದುದಾಗಿದೆ. ಏಕೆಂದರೆ ಲಂಬಾಣಿಗಳು ಪೂರ್ವದಲ್ಲಿ ಸೈನ್ಯಗಳಿಗೆ ಆಹಾರ ಪದಾರ್ಥಗಳನ್ನು ಸರಬರಾಜು ಮಾಡುವಾಗ 'ಸುಕಾಲಿ'ಗಳು ಎಂದು ಕರೆದಿರಬಹುದು. ಹೀಗೆ ಸುಕಾಲಿಗಳು ಎಂದು ಕರೆಯುವ ಸಂದರ್ಭದಲ್ಲಿ ಇವರಿಗೆ ವ್ಯಂಗ್ಯವಾದಂತೆ ಭಾಸವಾಗಿ ಇಂದಿಗೂ ತಮ್ಮನ್ನು ಸುಕಾಲಿಗಳೆಂದು ಜನರು ಕರೆಯುವುದನ್ನು ವಿರೋಧಿಸುತ್ತಾರೆ.

ಆಂಧ್ರ ಮತ್ತು ಕರ್ನಾಟಕದ ಗಡಿ ಭಾಗಗಳಾದ ಪಾವಗಡ, ಮಡಕಶಿರ, ಪ್ರದೇಶಗಳಲ್ಲಿ ಬಂಜಾರರು ಸುಣ್ಣದ ವ್ಯಾಪಾರವನ್ನು ತಮ್ಮ ಮುಖ್ಯ ವೃತ್ತಿಯನ್ನಾಗಿಸಿಕೊಂಡಿರವುದರಿಂದ ಈ ಜನಾಂಗವನ್ನು ಗುರುತಿಸಲು ಹೆಚ್ಚಾಗಿ 'ಸುಗಾಲಿ' ಎಂಬ ಪದ ಬಳಕೆಯಲ್ಲಿ ಇರುವುದನ್ನು ಕಾಣಬಹುದಾಗಿದೆ. ಈ ಪದಗಳು ಆಂಧ್ರಪ್ರದೇಶದಲ್ಲಿ ಹೆಚ್ಚು ಬಳಕೆಯಲ್ಲಿರುವುದರಿಂದ ಇವುಗಳನ್ನು ಪ್ರತ್ಯೇಕವಾಗಿ ಚರ್ಚಿಸಲಾಗಿದೆ. ಉಳಿದ ಪದಗಳು ಭಾರತದ ಕೆಲವು ರಾಜ್ಯಗಳಲ್ಲಿ ಅಲ್ಲಲ್ಲಿ ಕೆಲವು ಜಿಲ್ಲಾ ಪ್ರಾಂತ್ಯಗಳಲ್ಲಿ ಕಾಣಬಹುದಾಗಿದೆ.

ಲಂಬಾಣಿಗಳು ತಮ್ಮ ಕುಲಬಾಂದವರನ್ನು ಪ್ರತ್ಯೇಕವಾಗಿ ಗುರ್ತಿಸಿಕೊಳ್ಳುವುದಕ್ಕಾಗಿ ತಮ್ಮನ್ನು ತಾವು 'ಗೋರ್‌ಮಾಟಿ' ಅಥವಾ 'ಗೋರಭಾಯಿ' ಹಾಗೂ 'ಗೋರ್‌ದಾಸ್' ಎಂದು ಕರೆದುಕೊಳ್ಳುತ್ತಾರೆ. ಈ ಪದ 'ಗೋರ್' ಎಂಬ ಧಾತುವಿನಿಂದ ಉಗಮವಾಗಿದ್ದು ಇದಕ್ಕೆ 'ಶ್ವೇತ ವರ್ಣ' ಎಂಬ ಅರ್ಥವಿದೆ. ಲಂಬಾಣಿಗಳು ಲಂಬಾಣೇತರಿಂದ ಪ್ರತ್ಯೇಕಿಸಿಕೊಳ್ಳಲು ತಮ್ಮ ಜನಾಂಗವನ್ನು ಒಂದು ಪದದಡಿಯಲ್ಲಿ ಗುರ್ತಿಸಿಕೊಳ್ಳಲು ಇದನ್ನು ಬಳಸಿರಬಹುದು ಅಥವಾ ತಾವು ಹೀಗೆ ಮಾಸಿದ ಬಣ್ಣದವರಲ್ಲ ಅಥವಾ ಕಪ್ಪು ಬಣ್ಣದವರಲ್ಲ ಎಂಬುದನ್ನು ಹೆಮ್ಮೆಯಾಗಿ ಗುರ್ತಿಸಿಕೊಳ್ಳುವುದೇ ಅವರ ಉದ್ದೇಶವಾಗಿರಬಹುದು. ಅಂದರೆ ತಾವು ಬಿಳಿ ಜನ ಎಂಬುದನ್ನು ಸಾದರಪಡಿಸುವುದೇ ಅವರ ಮುಖ್ಯವಾದ ನಿಲುವು.

**ಇತಿಹಾಸ**

ಪ್ರಾಚೀನ ಕಾಲದಲ್ಲಿ ಕೃಷಿ ಆರ್ಯರ ವ್ಯಾಪರವಾಗಿತ್ತು. ಇವರ ಕಾಲದಲ್ಲಿ 'ಪಣಿ' ಎಂಬ ಹೆಸರಿನ ಜನರು ವ್ಯಾಪಾರ ಮಾಡುತ್ತಿದ್ದು ಇವರು ಹೆಚ್ಚು ಪ್ರಸಿದ್ಧರಾಗಿದ್ದರು. ಹೀಗಾಗಿ ಅವರು ಆರ್ಯರ ಶತ್ರುಗಳೆನಿಸಿದರು. ಈ 'ಪಣಿ' ಜನರ ಸಂಸ್ಕೃತಿ ಹಾಗೂ ಪರಂಪರೆಯ ಅಧ್ಯಯನದಿಂದ ಲಂಬಾಣಿಗರು 'ಪಣಿ' ಜನರ ಒಂದು ಶಾಖೆ ಯಾಗಿರಬಹುದೆಂದು ತಿಳಿದು ಬರುತ್ತದೆ. ಪಶುಪಾಲನೆಯು ಈ ಎರಡೂ ಜನರಲ್ಲಿಯೂ ಕಂಡು ಬರುತ್ತದೆ. ಮೂಲ ಉದ್ಯೋಗ ಹಾಗೂ ಸಾಂಸ್ಕೃತಿಕ ಆಧಾರದ ಮೇಲಿನಿಂದ 'ಪಣಿ' ಹಾಗೂ 'ಬಂಜಾರ' ಜತೆ ಸಾಮತ್ಯೆ ಕಂಡು ಬರುತ್ತದೆ. ಬಂಜಾರ ಸಮುದಾಯದಲ್ಲಿ ಇವತ್ತಿಗೂ ಪಣಿ, ಬನೀ, ಬಾನಿ, ದಾನಿ ಮುಂತಾದವು ಮಹಿಳೆಯರ ನಾಮ ಪದಗಳಾಗಿವೆ. ಆರ್ಯರು 'ಪಣಿ' ಜನರ ಮೇಲೆ ಆಕ್ರಮಣ ಮಾಡಿ ಸಂಪಾದನೆಗಾಗಿ ಭಾರತದ ಬೇರೆ ಬೇರೆ ಭಾಗಗಳಿಗೆ ವ್ಯಾಪಾರ ಮಾಡುತ್ತಾ ವಲಸೆ ಹೋಗಿ ಅಲ್ಲಿಯೇ ನೆಲೆಯಾಗಿ ಬಂಜಾರ, ಲಂಬಾಣಿ, ಬ್ರಜವಾಸಿ, ಲಭಾನ ಮುಂತಾದ ಹೆಸರುಗಳಿಂದ ಗುರುತಿಸಿಕೊಂಡರು.[೨೨]

ರಾಜಸ್ಥಾನದ ಇತಿಹಾಸವನ್ನು ಅಧ್ಯಯನ ಮಾಡಿದ **ಟಾಡ್** ಸಾಹೇಬರು ''ರಾಜಸ್ಥಾನದ ವ್ಯಾಪಾರಿ ವರ್ಗದಲ್ಲಿ ಒಂಟೆಯ ಮೇಲೆ ಸಾಮಾನುಗಳನ್ನು ಹೇರಿಕೊಂಡು ವ್ಯಾಪಾರ ಮಾಡುವ 'ಭೂವಿ' ಜಾತಿಯ ಜನರಲ್ಲಿ ಕೆಲವು

ಸಾಮರಸ್ಯ ಅಂಶಗಳು ಕಂಡು ಬರುತ್ತವೆ. ಹೀಗಾಗಿ 'ಭೂವಿ' ಜಾತಿಯ ಜನರೇ ಮುಂದುವರೆದು ತಮ್ಮನ್ನು ಬಂಜಾರ ಎಂದು ಕರೆದುಕೊಂಡಿರಬೇಕು" ಎಂದು ಅಭಿಪ್ರಾಯ ಪಡುತ್ತಾರೆ.

ಹೀಗೆ ಲಂಬಾಣಿಗರ ಮೂಲದ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳು ಕಂಡು ಬರುತ್ತವೆ. ಲಂಬಾಣಿಗಳು ಆರ್ಯ ಮೂಲದ ರಾಜಸ್ಥಾನದ ಕ್ಷತ್ರಿಯರಾಗಿದ್ದು, ತಮ್ಮ ದನಗಳ ಮೇಲೆ ಖ್ಯಾದ ಪದಾರ್ಥಗಳನ್ನು ಹೇರಿಕೊಂಡು ವ್ಯಾಪಾರ ಕೈಗೊಂಡಿರುವರಾಗಿದ್ದರು. (ಕರ್ನಲ್ ಮೆಕೆಂಝಿ ೧೮೮೦-೧೫೨, ಥರಸ್ಟನ್ ೧೯೦೬-೨೪೧, ನಂಜುಡಯ್ಯ ಹಾಗೂ ಅಯ್ಯರ್ ೧೯೨೮-೧೩೬, ಚಿದಾನಂದ ಮೂರ್ತಿ ೧೯೭೦-೯, ಶೇರಸಿಂಗ್ ಶೇರ್ ೧೮೮೩-೯,೭೩) ಲವಣದ ವ್ಯಾಪಾರವನ್ನು ಕೈಗೊಂಡಿದ್ದರಿಂದಲೇ ಅವರಿಗೆ ಲಂಬಾಣಿ ಎಂಬ ಹೆಸರು ಬಂದಿದೆ, ಎಂದು ಅಭಿಪ್ರಾಯ ಪಡುತ್ತಾರೆ. ಆದರೆ ಡಾ. ಗ್ರಿಯರ್ಸನ್ ಅವರು ''Banjara are originally Dravidian, beeming aryanized at a come aratively early date, and philogical considerations point to the conclusion that this occurid some where in Raj Putaua" (1907) ಎಂದು ಹೇಳಿದ್ದಾರೆ. ಆದರೆ ಬಂಜಾರಗಳು ಮೂಲತಃ ದ್ರಾವಿಡರಾಗಿದ್ದು, ನಂತರ ಆರ್ಯರಾಗಿ ರಾಜಸ್ಥಾನದ ರಾಜಪೂತಾನದಲ್ಲಿ ಕಾಣಿಸಿಕೊಂಡರು.[೨೪]

ಇತಿಹಾಸ ತಜ್ಞ ವಾಡಟ್ಸನ್ ಅವರು ''Rajputs were welded out of Different non-Aryan material in to amartial societies of Interredated families and cartificate of desent from the sun and the moon" (1988-88) ಎಂದು ಹೇಳಿದ್ದಾರೆ. ರಜಪೂತರು ಆರ್ಯರಾಗಿದ್ದು, ಯುದ್ಧಪ್ರಿಯರಾಗಿದ್ದರು. ಅವರನ್ನು ಸೂರ್ಯ ಮತ್ತು ಚಂದ್ರರ ವಂಶಜರೆಂದು ಗುರುತಿಸಲಾಗುತ್ತಿತ್ತು ಎನ್ನಲಾಗಿದೆ.

ಹೀಗೆ ಲಂಬಾಣಿ ಮೂಲದ ಬಗೆಗೆ ಇತಿಹಾಸಕಾರರಲ್ಲಿ ಭಿನ್ನಾಭಿಪ್ರಾಯಗಳಿವೆ. ಸ್ವಾತಂತ್ರ್ಯ ಪೂರ್ವದಲ್ಲಿ ಭಾರತದ ಭಾಗವಾಗಿದ್ದ ಪಾಕಿಸ್ತಾನದ ಪ್ರಮುಖ ಪ್ರದೇಶಗಳಾಗಿರುವ ಸಿಂಧ್ ಹಾಗೂ ಬಲೂಚಿಸ್ತಾನದಲ್ಲಿ ಲಂಬಾಣಿಗಳಿದ್ದಾರೆ. ಯುದ್ಧ ಪ್ರಿಯರಾಗಿದ್ದು ಭಾರತದ ಮೇಲೆ ಆಕ್ರಮಣ ಮಾಡುತ್ತಿದ್ದ ಬ್ರಿಟಿಷ್‌ರನ್ನು ಎದುರಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಅಲೆಕ್ಸಾಂಡರ್ ಹಾಗೂ ಮೊಗಲರ ಆಕ್ರಮಣವನ್ನು ಬಲವಾಗಿ ವಿರೋಧಿಸಿದ ಇವರು ಭಾರತದ ಉತ್ತರ ಭಾಗದಲ್ಲಿ ಹಾಗೂ ಯುರೋಪನ ಅನೇಕ ದೇಶಗಳಿಗೆ ವ್ಯಾಪಾರಿಗಳಾಗಿ, ಸಾಮಾನು ಸರಬರಾಜು ಮಾಡುವವರಾಗಿ, ಸೈನಿಕರಾಗಿ ಪಸರಿಸಿದರು. ಆರ್ಯ ಹಾಗೂ ದ್ರಾವಿಡ ಸಂಸ್ಕೃತಿಗಳಿಗಿಂತಲೂ ಭಿನ್ನವಾದ ತಮ್ಮದೇ ಆದ ಸಂಸ್ಕೃತಿಯನ್ನು ಹೊಂದಿದ್ದು ನಂತರದಲ್ಲಿ ಆರ್ಯ ಹಾಗೂ ದ್ರಾವಿಡ ಸಂಸ್ಕೃತಿಗಳ ಪ್ರಭಾವಕ್ಕೆ ಒಳಗಾದ ಈ ಸಂಸ್ಕೃತಿಯ ಅನೇಕ ಅಂಶಗಳನ್ನು ಅವುಗಳಿಂದ ಪಡೆದುಕೊಂಡು ಒಂದು ವಿಶಿಷ್ಟ ಸಂಸ್ಕೃತಿಯಾಗಿ ಬೆಳೆಯಿತು. ಸಿಂಧ್ ಹಾಗೂ ಬಲೂಚಿಸ್ತಾನಗಳಿಂದ ರಾಜಸ್ಥಾನ 'ಪಹಾಡ' ಪ್ರದೇಶಕ್ಕೆ ಪಸರಿಸಿದ ಲಂಬಾಣಿಗರು, ನಂತರ 'ಮಾಳವಾ' ಮುಖಾಂತರವಾಗಿ ಹೊರಟು ಕ್ರಮೇಣ ಭಾರತದ ತುಂಬೆಲ್ಲ ಪಸರಿಸತೊಡಗಿದರು. ಇವರ ಸಾಹಸ ಮತ್ತು ಪ್ರಾಮಾಣಿಕತೆಗಳಿಗೆ ಮಾರುಹೋದ ಮೊಗಲರು ಇವರಲ್ಲಿ ಎಷ್ಟೋ ಜನರನ್ನು ತಮ್ಮ ಸೈನ್ಯಕ್ಕೆ ದವಸಧಾನ್ಯಗಳನ್ನು ಪೂರೈಸಲು ನೇಮಿಸಿಕೊಂಡರು.[೨೫]

**ದಕ್ಷಿಣಕ್ಕೆ ವಲಸೆ:** ರಾಣಾ ಪ್ರತಾಪನ ಮರಣಾನಂತರದಲ್ಲಿ ನಿರಾಶ್ರಿತರಾದ ಈ ಜನರು ಬದುಕುವುದಕ್ಕೂ ಕಷ್ಟಕರವಾಗಿ ಜೀವನೋಪಾಯಕ್ಕಾಗಿ ಅಲ್ಲಿಂದ ಹೋರ ಬೀಳಬೇಕಾಗಿ ಬಂತು. ಬಹುಕಾಲ ಅಡವಿಯಲ್ಲಿ ವಾಸಿಸಿದ ಈ ಜನರು ಪಶುಪಾಲನೆ ಮಾಡಿರುವುದು ಸ್ವಾಭಾವಿಕ. ಇದರಿಂದಾಗಿ ಪ್ರತಿಯೊಂದು ಮನೆಯಲ್ಲಿ ಸಾಕಷ್ಟು ಜಾನುವಾರುಗಳಿದ್ದವು. ಅವರು ತಮ್ಮ ಜಾನುವಾರುಗಳ ಸಮೇತವಾಗಿ ಮಾತೃಭೂಮಿ 'ರಾಜಸ್ಥಾನ' ಹಾಗೂ 'ಪಹಾಡ' ಪ್ರದೇಶಗಳನ್ನು ತೊರೆದು 'ಮಾಳವಾ' ಮುಖಾಂತರವಾಗಿ ಹೊರಬಿದ್ದರು. (ಲಮಾಣಿ ೧೯೭೬:೧) ಈ ಸಮಯದಲ್ಲಿ ಲಂಬಾಣಿಗರು ಅನಿವಾರ್ಯವಾಗಿ ಮೊಗಲರ ಸೇವೆಗಾಗಿ ನಿಲ್ಲಬೇಕಾಯಿತು. ಇವರು ಮೊಗಲರ ಸೈನ್ಯಕ್ಕೆ ಆಹಾರ ಧಾನ್ಯ ಹಾಗೂ ಯುದ್ಧ ಸಾಮಗ್ರಿಗಳನ್ನು ತಲುಪಿಸುವ ಹೊಣೆ ಹೊತ್ತರು. (ಶೇರ್‌ಸಿಂಗ್‌ಶೇರ್ ೧೮೮೩:೦೬)

**ಶಾಸನ ರೂಪದ ಆಧಾರಗಳು:** ಯಾವುದೇ ಜನಾಂಗದ ಇತಿಹಾಸವನ್ನು ಅರಿಯಬೇಕಾದರೆ ಲಿಖಿತ ಆಧಾರಗಳು ಪ್ರಮುಖವಾದ ಆಧಾರಗಳಾಗಿರುತ್ತವೆ. ಆದರೆ ದುರದೃಷ್ಟಕರ ಸಂಗತಿ ಎಂದರೆ, ಲಂಬಾಣಿ ಸಮುದಾಯದ ಅಧ್ಯಯನಕ್ಕೆ ಯಾವುದೇ ಲಿಖಿತ ದಾಖಲೆಗಳು ಲಂಬಾಣಿ ಭಾಷೆಯಲ್ಲಿ ಸಿಗುವುದಿಲ್ಲ. (ಬಂಜಾರ ಭಾಷೆ ಲಿಪಿಯಿಲ್ಲದ ಭಾಷೆ) ಹೀಗಾಗಿ ಈ ಸಮುದಾಯದ ಉಲ್ಲೇಖವಿರುವ ಆಧಾರಗಳನ್ನು ಇತರ ಭಾಷೆಗಳಲ್ಲಿ ಹುಡುಕಬೇಕಾಗುತ್ತದೆ. ಭಾರತದ ಶಾಸನಗಳ ಜನಕವೆನಿಸಿಕೊಂಡಿರುವ ಅಶೋಕನ ಕಾಲದಿಂದಲೂ ಶಾಸನಗಳು ಭಾರತದ ಮೂಲೆ-ಮೂಲೆಗಳಲ್ಲಿ ಕಂಡು ಬರುತ್ತವೆ. ಆಯಾ ಕಾಲದ ಸಾಂಸ್ಕೃತಿಕ ಸ್ಥಿತಿಗಳ ಮೇಲೆ ಬೆಳಕು ಚೆಲ್ಲುತ್ತವೆ. ಆದರೆ ಭಾರತದ ಸಂಸ್ಕೃತಿಯನ್ನು ಸಾಂಸ್ಕೃತಿಕವಾಗಿ ಶ್ರೀಮಂತಗೊಳಿಸುತ್ತಿರುವ ಜನಾಂಗಗಳಲ್ಲಿ ಒಂದಾದ ಲಂಬಾಣಿ ಬುಡಕಟ್ಟಿನ ಬಗೆಗೆ ಯಾವುದೇ ಶಾಸನಗಳಲ್ಲಿ ಉಲ್ಲೇಖಗಳು ಸಿಗುವುದಿಲ್ಲ.

**ಕುಂಬ್ರಲೇಜಾ:** ಅವರು ತಮ್ಮ ಗ್ರಂಥದಲ್ಲಿ 'ಭಂಗಿ-ಜಂಗಿ' ಎಂಬ ಇಬ್ಬರು ಲಂಬಾಣಿ ನಾಯಕರು. 'ಅಸಫಜಾನ್' ಮತ್ತು 'ವಜೀರ್‌ಜಾನ್' 'ಷಹಜಹಾನ್' ಎಂಬುವರೊಂದಿಗೆ ಕ್ರಿ.ಶ. ೧೬೩೦ ರಲ್ಲಿ ಮಾಡಿದ ಒಪ್ಪಂದದ ಒಂದು ತಾಮ್ರ ಪತ್ರವನ್ನು ಉಲ್ಲೇಖಿಸಿದ್ದಾರೆ. ಅದನ್ನು ಹೈದರಾಬಾದ್ ನ್ಯಾಯಾಲಯದ ಪ್ರವೇಶದ್ವಾರದಲ್ಲಿ ಈಗಲೂ ಕಾಣಬಹುದು. ಉತ್ತರ ಭಾರತದಿಂದ ದಕ್ಷಿಣ ಭಾರತದ ಕಡೆಗೆ ಯುದ್ಧ ಮಾಡಲು ಹೊರಟ ತನ್ನ ಸೈನಿಕರನ್ನು ಹಿಂಬಾಲಿಸಲು ೧,೮೦,೦೦೦ ಜಾನುವಾರಗಳ ಹೇರುಳ್ಳ ಭಂಗಿ-ಜಂಗಿ, ಹೆಸರಿನ ಬಂಜಾರ ನಾಯಕರಿಗೂ ೫೨,೦೦೦ ಜಾನುವಾರಗಳ ಹೇರುಳ್ಳ ಭಗವಾನ್‌ದಾಸ್ ವಡತ್ಯಾನಿಗೂ ಅಸಫಜಾನ್ ಆದೇಶಿಸುತ್ತಾನೆ. ಸರಕು ಸಾಗಣೆಯಿಂದ ಆಗಬಹುದಾದ ತೊಂದರೆಯನ್ನು ಮನಗಂಡು ಅಸಪ್‌ಜಾನ್ ಭಂಗಿ ಜಂಗಿ ನಾಯಕರುಗಳಿಗೆ ಬಂಗಾರದ ಬರಹವಿರುವ ತಾಮ್ರ ಶಾಸನದ ನಿರೂಪವೊಂದನ್ನು ನೋಡಬಹುದು.

''ರಂಜನ್ ಕಾ ಪಾನಿ
ಛಪ್ಪರ್ ಕಾ ಘಾಸ್
ದಿನ್ ಕಾ ತೀನ್ ಖೂನ್ ಮಾಫ್
ಔರ ಜಹಾ ಅಸಪ್‌ಜಾನ್ ಘೋರ್
ವೆನ್ ಭಂಗಿ-ಜಂಗಿ ಕಾ ಬೈಲ್ ''[೨೭]

ಬಂಜಾರಾಗಳೇ ನಿಮಗೆ ನೀರಿನ ಕೊರತೆಯಾದಲ್ಲಿ ಸರದಾರರ ಮನೆಯಲ್ಲಿರುವ ರಂಜಣಿಗೆಗಳಲ್ಲಿ ತುಂಬಿರುವ ನೀರನ್ನು ಉಪಯೋಗಿಸಿಕೊಳ್ಳಬಹುದು. ಜಾನುವಾರುಗಳಿಗೆ ಮೇವಿನ ತೊಂದರೆಯಾದಲ್ಲಿ ಊರಿನ ಗುಡುಸಿಲುಗಳ ಮೇಲೆ ಹೊದಿಸಿರುವ ಹುಲ್ಲಿನ ಮೆದೆಗಳನ್ನು ಪಡೆಯಬಹುದು. ಅಲ್ಲದೆ ಸೈನ್ಯಕ್ಕೆ ಆಹಾರ ಸಾಮಗ್ರಿಗಳನ್ನು ಪೂರೈಸುವಾಗ ಏನಾದರೂ ಅಡತಡೆಗಳು ಉಂಟಾದಲ್ಲಿ ಅದನ್ನು ನಿವಾರಿಸಿಕೊಳ್ಳುವಾಗ ದಿನಕ್ಕೆ ಮೂರು ಕೊಲೆ ಮಾಡಿದರೂ ಕ್ಷಮೆ ಇದೆ. ಎಲ್ಲಲ್ಲಿ ಅಸಫ್‌ಜಾನ್‌ನ ಕುದುರೆಗಳಿದೆಯೇ ಅಲ್ಲಲ್ಲಿ ಭಂಗಿ-ಜಂಗಿ ನಾಯಕರ ಎತ್ತುಗಳಿರಬೇಕು.

ಈ ರಾಜ ಮುದ್ರೆಯು ಅಸಫ್‌ಜಾನ್‌ನ ಸೈನ್ಯಕ್ಕೆ ಆಹಾರ ಧಾನ್ಯಗಳನ್ನು ಬೇಕು ಬೇಡಿಕೆಗಳನ್ನು ಪೂರೈಸುವಲ್ಲಿ ಬಂಜಾರಗಳು ವಹಿಸುತ್ತಿದ್ದ ಪಾತ್ರ ಹಾಗೂ ಅವರ ಬಗೆಗಿರುವ ನವಾಬನ ಪ್ರೀತಿ ಹಾಗೂ ವಿಶ್ವಾಸ ವ್ಯಕ್ತಪಡಿಸುತ್ತದೆ. ಲಂಬಾಣಿಗರು ಮೊಗಲ ಸೈನ್ಯಕ್ಕೆ ಆಹಾರ ಸಾಮಗ್ರಿಗಳನ್ನು ಸರಬರಾಜು ಮಾಡುತ್ತಿದ್ದಂತೆಯೇ ತಮ್ಮ ಮೂಲ ಉದ್ಯೋಗವಾದ ವ್ಯಾಪಾರವನ್ನು ಸಂಪೂರ್ಣವಾಗಿ ಬಿಟ್ಟಿರಲಿಲ್ಲ. ಅವರ ಉದ್ಯೋಗವು ಹಾಗೆಯೇ ತಮ್ಮ ಮುಂದುವರೆದಿತ್ತು. ಅವರ ವ್ಯಾಪಾರವು ಭಾರತಕ್ಕೆ ಸೀಮಿತವಾಗುಳಿಯದೇ, ಮಧ್ಯ ಆಫ್ರೀಕಾ, ಅಫಘಾನಿಸ್ತಾನ, ಇಟಲಿ, ಚೀನಾ, ಟಿಬೇಟ್, ಅರಬಸ್ತಾನ ಮುಂತಾದ ರಾಷ್ಟ್ರಗಳೊಂದಿಗೆ ಪಸರಿಸಿತ್ತು. ಇಟಲಿಯ 'ಲಂಬಾರ್ಡಿಯಾ' ಪಟ್ಟಣವು ಅವರ ವ್ಯಾಪಾರದ ಕೇಂದ್ರವಾಗಿತ್ತು. ವ್ಯಾಪಾರಕ್ಕಾಗಿ ಹೋದ ಕೆಲವು ಕುಟುಂಬಗಳು ಯುರೋಪ, ಅಮೇರಿಕಾ ಹಾಗೂ ಆಫ್ರಿಕಾ ಖಂಡಗಳ ಅನೇಕ ದೇಶಗಳಲ್ಲಿ ನೆಲೆಯಾಗಿ ನಿಂತು 'ರಮ್ಯಾನಿಜ' (ಜಿಪ್ಸಿ) ಎಂಬ ಹೆಸರುಗಳಿಂದ ಕರೆಸಿಕೊಂಡರು.[೨೨]

ಮೊಗಲ 'ಸಾಮ್ರಾಜ್ಯ' ಪತನದ ನಂತರ ಭಾರತದಲ್ಲಿ ಬದಲಾವಣೆಯ ಗಾಳಿ ಬೀಸಲಾರಂಭಿಸಿತು. ಇದರಿಂದಾಗಿ ಕೆಲವರಿಗೆ ಲಾಭ ಉಂಟಾದರೆ ಇನ್ನು ಕೆಲವರಿಗೆ ಹಾನಿಯುಂಟಾಯಿತು. ಕ್ರಿ.ಶ. ೧೮೬೦-೬೫ ರಲ್ಲಿ ರೈಲುಗಾಡಿಗಳು ಭಾರತಕ್ಕೆ ಪಾದಾರ್ಪಣೆ ಮಾಡಿದ್ದು ಲಂಬಾಣಿಗರ ಪಾಲಿಗೆ ಯಮನ ಆಗಮನವಾದಂತಾಯಿತು. ರೈಲುಗಳು ವ್ಯಾಪಾರದ ಸಾಗಾಣಿಕೆಯಲ್ಲಿ ಪ್ರಮುಖವಾದ ಪಾತ್ರ ವಹಿಸತೊಡಗಿದ್ದರಿಂದ ಲಂಬಾಣಿಗರ ವ್ಯಾಪಾರಕ್ಕೆ ಬಲವಾದ ಪೆಟ್ಟು ತಗುಲಿತು. ರೈಲುಗಳ ಜೊತೆಗೆ ಎತ್ತುಗಳ ಪೈಪೋಟಿ ಹೇಗೆ ಸಾಧ್ಯ? ಕ್ರಮೇಣ ಅವರ ವ್ಯಾಪಾರ ಕುಗ್ಗಿ ಹೋಯಿತು. ಇದರಿಂದಾಗಿ ಅವರು ತಮ್ಮಲ್ಲಿರುವ ಅಪಾರ ಸಂಖ್ಯೆಯ ದನಕರುಗಳ ಸಾಕಲು ಸಾಧ್ಯವಾಗದೇ ಅವುಗಳನ್ನು ಮಾರಾಟ ಮಾಡಿ ಜೀವಿಸಲಾರಂಭಿಸಿದರು. ತಮ್ಮ ಹೊಟ್ಟೆಯ ಮೇಲೆ ಕಾಲಿಟ್ಟ ಬ್ರಿಟಿಷ್ ಸರಕಾರದ ವಿರುದ್ಧ ಸೇಡು ತೀರಿಸಿಕೊಳ್ಳಲು ಮುಂದಾದರು. ಬ್ರಿಟಿಷ್ ಸರಕಾರವು ಈ ಜನರನ್ನು ಅಪರಾಧಿ ಜನಾಂಗ (Criminal Tribes) ಎಂದು ಘೋಷಿಸಿದರು. ಆರ್ಯ ಮೂಲದ ಕ್ಷತ್ರಿಯ ವಂಶಜರಾದ ಲಂಬಾಣಿಗರು ಸರಕಾರದ ಆಕ್ರಮಣಕ್ಕೆ ಹೆದರಿ ಕಾಡನ್ನು ಸೇರಿದರು. ಊರಿಂದ ದೂರದ ಗುಡ್ಡಗಾಡು ಪ್ರದೇಶಗಳಲ್ಲಿ ತಮ್ಮದೇ ಆದ 'ತಾಂಡ' ಗಳನ್ನು ಕಟ್ಟಿಕೊಂಡು ವಾಸಿಸತೊಡಗಿದರು. ಸಾಮಾನ್ಯವಾಗಿ ಅವರು ತಮ್ಮ ತಾಂಡಕ್ಕೆ ಸಮೀಪದ ಊರಗಳ ಹೆಸರಿನಿಂದಾಗಲಿ ತಾಂಡದ ನಾಯಕ (ತಾಂಡದ ಮುಖ್ಯಸ್ಥ) ನ ಹೆಸರಿನಿಂದಾಗಲಿ ಅಥವಾ ತಾಂಡದ ಭಗತ್ (ಪೂಜಾರಿ) ನ ಹೆಸರಿನಿಂದಾಗಲಿ ಗುರುತಿಸಿಕೊಳ್ಳುತ್ತಾರೆ. ಲಂಬಾಣಿಗರು ತಮ್ಮ ತಾಂಡಗಳಿಗೆ ತಮ್ಮದೇ ಆದ ಸ್ಥಳನಾಮಗಳನಿಟ್ಟುಕೊಂಡಿರುತ್ತಾರೆ.

## ಮೌಖಿಕ ಆಧಾರಗಳು

ಲಂಬಾಣಿಗರ ಕುರಿತು ಪೌರಾಣಿಕ, ಐತಿಹಾಸಿಕ ಹಾಗೂ ಸಾಂಸ್ಕೃತಿಕ ವಿವರಗಳಿವೆ. ಪ್ರತಿಯೊಂದು ಸಮುದಾಯವು ತನ್ನ ಮೂಲದ ಬಗೆಗೆ ನಿರ್ದಿಷ್ಟವಾದ ಪುರಾವೆಗಳು ಇಲ್ಲದಿರುವುದರಿಂದ ಕೆಲವು ಸಾಂಸ್ಕೃತಿಕ ಅಂಶಗಳನ್ನು ಅವಲಂಭಿಸಬೇಕಾಗುತ್ತದೆ. ಅವುಗಳ ಹಿನ್ನೆಲೆಯಲ್ಲಿ ಆ ಸಮುದಾಯದ ಮೂಲವನ್ನು ಕಂಡುಕೊಳ್ಳಬೇಕಾಗುತ್ತದೆ. ಅಂತಹ ಸಮುದಾಯದಲ್ಲಿ ಲಂಬಾಣಿ ಸಮುದಾಯ ಒಂದು. ಇವರ ಮೂಲದ ಬಗೆಗೆ ಅನೇಕ ಪೌರಾಣಿಕ ಹಾಗೂ ಐತಿಹಾಸಿಕ ಅಂಶಗಳನ್ನು ಆಧರಿಸಿದ ದಂತ ಕಥೆಗಳು ಇವೆ. ಅವು ಈ ಕೆಳಗಿನಂತೆ ನೋಡಬಹುದು.

**ಐತಿಹ್ಯ-೧:** ಒಂದು ಸಲ ದೇವರು ಆಕಾಶದಿಂದ ಒಂದು ಬೀಜ ಬಿತ್ತಿದ್ದರು. ಆ ಬೀಜದಿಂದ ಒಂದು ಕನ್ಯೆಯ ಜನ್ಮವಾಯಿತು. ಆ ಕನ್ಯೆಯ ಬೆವರಿನಿಂದ ಒಬ್ಬ ಬಾಲಕನ ಜನನವಾಯಿತು. ಆ ಬಾಲಕ ಪ್ರೌಢ ವ್ಯವಸ್ಥೆಗೆ ಬಂದಾಗ ಆ ಕನ್ಯೆಗೆ ಲೈಂಗಿಕ ಬಯಕೆಯಾಯಿತು. ಆ ಬಾಲಕ ಕನ್ಯೆಯ ಆಸೆ ತಿರಸ್ಕರಿಸಿದನು, ನಂತರ ಇನ್ನೊಬ್ಬ ಬಾಲಕನ ಜನನವಾಯಿತು. ಅವನೂ ಸಹ ತಿರಸ್ಕರಿಸಿದನು. ಮೂರನೆಯ ಬಾಲಕನ ಜನನವಾಯಿತು. ಅವನು ನಿರಾಕರಿಸದೆ ಒಪ್ಪಿಗೆಯನ್ನು ನೀಡಿದನು. ಅವರ ಮಿಲನದಿಂದ ಸೃಷ್ಟಿಯ ಪ್ರಥಮ ಪುರುಷ ಜನಿಸಿದನು. ಅವರಿಂದ ಅನೇಕ ಮಕ್ಕಳಾದವು. ಅವರಲ್ಲಿ ಕಚ್ಛಪ್ಪ ಒಬ್ಬನು. ಆ ಕಚ್ಛಪನ ಮಕ್ಕಳು ತೀಡಾ, ಛಾಡಾ. ಛಾಡಾನ ಮಕ್ಕಳು ಊರವರು ಹಾಗೂ ನಗರವಾಸಿಗಳು. ತಿಡಾನಿಗೆ ನಾಥಡದ್, ಜೋಷಿಡದ್, ಖೀಮಡ್, ಮೋಟಾ ಹಾಗೂ ಮೋಣ ಎಂಬ ಮಕ್ಕಳು ಹುಟ್ಟಿದರು. ನಾಥಡದ್ ಮಗ ವಾಗ್ರಿ ವಂಶಜನಾದನು. ಅವನು ಬೇಟೆಯನ್ನು ಅವಲಂಬಿಸಿದವನು. ಜೋಷಡದ್‌ನ ಸಂತಾನ ಜೋಗಿಯಾದರೆ ಖದಡದನ್ ಸಂತಾನ ಲೋಹಾರ, ಕಮ್ಮಾರನಾದನು. ಮೋಟಾನ ವಂಶಜರು ಬಂಜಾರಗಳಾದರೆ ಮೋಣಾನ ವಂಶಜರು ಲಂಬಾಣಿಗಳಾದರು.[೨೮]

**ಐತಿಹ್ಯ-೨:** ಲಂಬಾಣಿಗರು ವಾಲಿ ಸುಗ್ರೀವರ ವಂಶಜರು. ತೀಡಾನ ಐದು ಜನ ಮಕ್ಕಳಲ್ಲಿ ಕೃಷ್ಣನ ಭಕ್ತನಾದ ಮೋಲಾ. ಈತನಿಗೆ ಬಹುಕಾಲದವರೆಗೆ ಮಕ್ಕಳಾಗಲಿಲ್ಲ. ನೃತ್ಯ ಸಂಗೀತಗಳಲ್ಲಿ ಹೆಚ್ಚು ಪ್ರವೀಣನಾಗಿದ್ದನು. ಶ್ರೀ ಕೃಷ್ಣನು ರಾಧಾಳನ್ನು ಗೋಕುಲದಲ್ಲಿ ಬಿಟ್ಟು ಹೋದ ಸಂದರ್ಭದಲ್ಲಿ ರಾಧಾ ಇವನನ್ನು ಸೇವಕನನ್ನಾಗಿ ಮಾಡಿಕೊಂಡಳು. ಗೀತ, ನೃತ್ಯಗಳಲ್ಲಿ ಪ್ರವೀಣರಾದ ಇಬ್ಬರು ಸೇರಿಕೊಂಡು ಅರಮನೆಗೆ ಹೋಗಿ ನೃತ್ಯಕಲೆಯ ಪ್ರದರ್ಶನ ಮಾಡುತ್ತಿದ್ದರು. ಧನಜಿ ಗಡರಾಜ ದರಬಾರಕ್ಕೆ ಹೋಗಿ ನೃತ್ಯ ಸಂಗೀತ ಕಲೆಯನ್ನು ಪ್ರದರ್ಶನ ಮಾಡಿದರು. ಇವರು ಕಲೆಗೆ ಮೆಚ್ಚಿದ ಅರಸರು ತಮಗೆ ಬೇಕಾದ ಕಾಣಿಕೆಯನ್ನು ಕೇಳುವಂತೆ ತಿಳಿಸಿದರು. ಮಕ್ಕಳಿಗಾಗಿ ಕೋರಗುತ್ತಿದ್ದ ಇವರು ರಾಜನಿಗೆ ಮಗನನ್ನು ಕೊಡುವಂತೆ ಕೇಳಿದರು. ರಾಜನು ತನ್ನ ಮಗನನ್ನು ಕಾಣಿಕೆಯಾಗಿ ಕೊಟ್ಟರು. ಈತನೆ ಮುಂದೆ ರಾಥೋಡ ವಂಶಜನಾದನು. ಅದೇ ರೀತಿಯಲ್ಲಿ ರಾಧಾ ಮತ್ತು ಮೋಲಾ ಇಬ್ಬರು ಬಾನೋಗಡದ ಅರಸರ ದರಬಾರದಲ್ಲಿ ತಮ್ಮ ನೃತ್ಯ ಪ್ರದರ್ಶನವನ್ನು ಮಾಡಿದರು. ಆ ಅರಸನಿಂದ ಒಬ್ಬ ಮಗನನ್ನು ಪಡೆದುಕೊಂಡರು. ಅವನು ಮುಂದೆ ಪವಾರ ವಂಶದ ಮೂಲ ಪುರುಷನಾದನು. ಹಾಗೆಯೇ ಜಂಗತಗಡದ ಅಸರನಿಂದ ಪಡೆದ ಮಗು ಚವ್ಹಾಣ ವಂಶದ ಮೂಲ ಪುರುಷನೆನಿಸಿದನು.[೨೯]

ಹೀಗೆ ಮೂರು ಜನ ಮಕ್ಕಳನ್ನು ಪಡೆದು ಮೋಲಾ ಸುಖವಾಗಿದ್ದನು. ಅವರು ಮುಂದೆ ಬೆಳೆದು ದೊಡ್ಡವರಾದರು. ಮಕ್ಕಳ ಮದುವೆಯ ಚಿಂತೆ ಅವನನ್ನು ಬಾಧಿಸುತ್ತಿತ್ತು. ಒಮ್ಮೆ ನದಿ ತೀರದಲ್ಲಿ ಗೋವುಗಳನ್ನು ಕಾಯುತ್ತಿರುವಾಗ ಚಿಂತೆಯಲ್ಲಿರುವ ಒಬ್ಬ ಬ್ರಾಹ್ಮಣನನ್ನು ಕಂಡು ಮೋಲಾ ವಿಚಾರಿಸಿದನು. ಆಗ ಅವನು ಬೆಳೆದು ದೊಡ್ಡವರಾದ ತನ್ನ ಮೂರು ಕನ್ಯೆಯ ಮದುವೆಯನ್ನು ಮಾಡಲಾಗದ ಅಳಲನ್ನು ತೋಡಿಕೊಂಡನು. ಆಗ ತನ್ನ ಮೂರು ಗಂಡ ಮಕ್ಕಳ ಜೊತೆ ತನ್ನ ಮೂರು ಕನ್ಯೆಯ ಮದುವೆ ಮಾಡಿಸಲು ವಿಷಯ ಪ್ರಸ್ತಾಪಿಸಿದನು. ಬ್ರಾಹ್ಮಣನು ನಿರಾಕರಿಸದೆ ಮದುವೆ ಮಾಡಿಸಿದನು. ಇವರ ಸಂತಾನವೇ ರಾಠೋಡ, ಪವಾರ ಹಾಗೂ ಚವ್ಹಾಣರು.[೩೦]

**ಐತಿಹ್ಯ ೩.**

ಸೃಷ್ಟಿಯು ಐದು ತತ್ವಗಳ ಮೇಲೆ ನಿಂತಿರುವಂತಹದು. ಆ ಅಂಶಗಳು ಆಕಾದ್ (ಆಕಾಶ) ಜನಾದ್ (ಭೂಮಿ) ವಾದ್ (ಗಾಳಿ) ಧಜ್ (ಬೆಂಕಿ) ಕೋಳಧಜ್ (ನೀರು) ಆಗಿದ್ದು. ಇವುಗಳಿಂದ ಸೃಷ್ಟಿಕೃತನು




ಇದನ್ನೇ ಸ್ಥೂಲವಾಗಿ ಹೇಳುವುದಾದರೆ ಸೃಷ್ಟಿಕರ್ತನಾದ 'ಧಜ್' ನಿಂದ 'ಕವರ ಧಜ್', ಈತನಿಂದ 'ಕವರಫಾಳ್' ಇವನಿಂದ 'ತೀಡಾ' ಹಾಗೂ 'ಭೇಡಾ' ಎಂಬವರು ಉತ್ಪತ್ತಿಯಾಯಿತು. ಮುಂದೆ 'ತೀಡಾ' ನಿಂದ 'ಗೋರ್' ಹಾಗೂ 'ಭೇಡಾ' ನಿಂದ 'ಕೋರ್' ಇವರು ಉತ್ಪತ್ತಿಯಾಯಿತು. 'ಕೋರ್' ಎಂದರೆ ಲಮಾಣೇತರ ಜನ 'ಗೋರ್' ಎಂದರೆ ಲಂಬಾಣಿಗರು. ಈ 'ಗೋರ್' ಎಂಬುವನಿಗೆ ಐದು ಜನ ಮಕ್ಕಳು ೧. ನಾತಡ ೨. ಜೋಗಡ ೩. ಖೇಮಡ ೪. ಮೋಲಾ ೫. ಮೋಟಾ ಎಂದು. ಇವರು ಮುಂದೆ ಬೇರೆ ಬೇರೆ ಪಂಗಡಗಳಿಗೆ ಜನ್ಮವಿತ್ತರು. 'ನಾತಡ' ನಿಂದ ಚಿಗರಿಕಾರರಾದರು (ವಾಗರಿ), 'ಜೋಗಡ'ನಿಂದ (ಜೋಗಿ) 'ಖೇಮಡ' ನಿಂದ ಲಭಾಣೋ, 'ಮೋಟಾ'ನಿಂದ ಮಾರವಾಡಿ ಸಮಾಜ ಉತ್ಪತ್ತಿಯಾಯಿತು. ಆದರೆ 'ಮೋಲಾ' ಮಾತ್ರ ಆ ಜನ್ಮ ಬ್ರಹ್ಮಚಾರಿಯಾಗಿ ಉಳಿದನು. ಆದರೂ ಬಂಜಾರಾ ಮೂಲ ಪುರುಷನೆಂದು ಬಹುಜನ ವಿದ್ವಾಂಸರ ಅಭಿಪ್ರಾಯವಾಗಿದೆ.

'ಮೋಲಾ' ಕೃಷ್ಣನ ಪರಮ ಭಕ್ತನಾಗಿದ್ದನು. ಹೀಗಾಗಿ ಮೋಲಾನನ್ನು ರಾಧಿಕಾ ಅತ್ಯಂತ ಪ್ರೀತ್ಯಾಧರಗಳಿಂದ ಕಾಣುತ್ತಿದ್ದಳು. 'ಮೋಲಾ' ಆ ಜನ್ಮ ಬ್ರಹ್ಮಚಾರಿ ವೃತವನ್ನು ಕೈಗೊಂಡಿದ್ದರಿಂದ ಮೋಲಾನನ್ನು ತಮ್ಮ ಪಶುಪಾಲನೆಗಾಗಿ ಇಟ್ಟು ಕೊಂಡಿದ್ದರಂತೆ. ಮೋಲಾನ ಇನ್ನುಳಿದ ನಾಲ್ಕು ಜನ ಸಹೋದರರ ಮದುವೆಯಾಗಿ ಸಂತಾನ ಪ್ರಾಪ್ತಿಯಿಂದ ವಂಶಾವಳಿ ಬೆಳೆಯಿತು. ಆದರೆ 'ಮೋಲಾ' ಏಕಮಾತ್ರ ವ್ಯಕ್ತಿಯಾಗಿ ತನ್ನ ವಂಶದ ಕುಡಿಯೇ ಇಲ್ಲವೆಂದು ರಾಧಿಕಾಳ ಹತ್ತಿರ ತನ್ನ ಚಿಂತನೆಯನ್ನು ವ್ಯಕ್ತಪಡಿಸಿದನು. ಆದರೆ ರಾಧಿಕಾ, ಹೀಗೆಂದ ಕಾರಣಕ್ಕೆ ಆತನನ್ನು ವೃತಭ್ರಷ್ಟನನ್ನಾಗಿ ಮಾಡಲಿಲ್ಲ. ಆತನ ಇಚ್ಛೆಯನ್ನು ಈಡೇರಿಸುವುದಾಗಿ ವಂಶದ ಕುಡಿ ಬೆಳೆಯುವಂತೆ ಮಾಡುವುದಾಗಿ ವಚನಕೊಟ್ಟಳು.

ರಾಧಿಕಾರಾಣಿ ಸಾರ್ವಭೌಮ ಅಧಿಕಾರಿಣಿಯಾಗಿದ್ದಳು. ಅವಳ ಅಧೀನದಲ್ಲಿ ಅನೇಕ ಜನ ಮಾಂಡಲೀಕ ರಾಜ ಮಹಾರಾಜರುಗಳಿದ್ದರು. ಹೀಗಾಗಿ ರಾಧಿಕಾರಾಣಿಯು ಚೌಗಡದಿಂದ (ಇಂದಿನ ಚಿತ್ತೋಡಗಡ) ಒಬ್ಬ ಬಾಲಕನನ್ನು ಪಾಗಡದಿಂದ (ಇಂದಿನ ಮಾಳವಾ ಪ್ರದೇಶ) ಇನ್ನೊಬ್ಬ ಬಾಲಕನನ್ನು ಹಾಗೂ ರಾವುಗಡ (ರಾಜಸ್ಥಾನದ ರಾಹುರಿ ಮನೆತನ) ದಿಂದ ಮತ್ತೊಬ್ಬ ಬಾಲಕನನ್ನು ಹೀಗೆ ಮೂರು ಪ್ರಾಂತ್ಯಗಳಿಂದಲೂ ಒಬ್ಬೊಬ್ಬ ಬಾಲಕರನ್ನು ತಂದು ರಾಧಿಕಾರಾಣಿ ಮೋಲಾ ನಿಗೆ ದತ್ತಪುತ್ರರನ್ನು ನೀಡಿ, ಆ ಮೂವರಿಗೂ ಕ್ರಮವಾಗಿ ಚವ್ಹಾಣ, ಪವಾರ ಹಾಗೂ ರಾಠೋಡ ಎಂದು ನಾಮಕರಣ ಮಾಡಿದಳು. ಇದರಿಂದಾಗಿ ಆ ಮಕ್ಕಳನ್ನು ಕಂಡು ಮೋಲಾನಿಗೆ ಅತಿ ಸಂತೋಷವಾಯಿತು.

ಕಾಲಾಂತರದಲ್ಲಿ ಚವ್ಹಾಣ, ಪವಾರ ಹಾಗೂ ರಾಠೋಡರು ಬೆಳೆದು ಪ್ರಾಪ್ತಿ ವಯಸ್ಕರಾಗಿ ನಿಂತಾಗ ಮೋಲಾನಿಗೆ ಮಕ್ಕಳ ಮದುವೆಯ ಚಿಂತೆ ಆವರಿಸಿತು. ಇದೇ ಸಮಯದಲ್ಲಿ ಕಾಶಿ ಕ್ಷೇತ್ರದ ಒಬ್ಬ ಸನ್ಯಾಸಿ ಬ್ರಾಹ್ಮಣನು, ಸನ್ಯಾಸಿಯಾಗಿಯೂ ಮದುವೆ ಮಾಡಿಕೊಂಡು ಸಂತಾನವನ್ನು ಪಡೆದ ನಿಮಿತ್ತ ಬ್ರಾಹ್ಮಣರು ಆತನನ್ನು ಬಹಿಷ್ಕರಿಸಿದರಂತೆ, ಸನ್ಯಾಸಿಯ ಪಾಪ ಪರಿಹಾರಕ್ಕಾಗಿ ದೇಹಾಂತ ಪ್ರಾಯಶ್ಚಿತ್ತವಾದರೆ ಮಾತ್ರ ಆತನಿಗೆ ಮುಕ್ತಿ ಲಭಿಸುವುದೆಂದು ಈ ಬ್ರಾಹ್ಮಣರು ಆತನಿಗೆ ಬಹಿಷ್ಕಾರ ಹಾಕಿದರು. ಹೀಗಾಗಿ ಸನ್ಯಾಸಿ ಬ್ರಾಹ್ಮಣ ತನ್ನ ಮೂರು ಜನ ಬೆಳೆದು ನಿಂತ ಹೆಣ್ಣು ಮಕ್ಕಳ ಮದುವೆ ಮಾಡುವುದಕ್ಕಾಗಿ ಅಲೆಯುತ್ತಿದ್ದರು.

ಒಂದು ಸಲ 'ಮೋಲಾ' ದನಗಳನ್ನು ಮೇಯಿಸಿಕೊಂಡು, ನೀರು ಕುಡಿಸಲೆಂದು ನದಿ ತೀರಕ್ಕೆ ಬಂದನು. ಅಲ್ಲಿ ಆಕಸ್ಮಿಕವಾಗಿ ಈ ಸನ್ಯಾಸಿಯ ಬೇಟಿಯಾಗಿ ಅವನ ಸ್ಥಿತಿಗತಿಯನ್ನರಿತು ರಾಧಿಕಾಗೆ ಬಂದು ತಿಳಿಸಿದನು. ರಾಧಿಕಾ ತಕ್ಷಣವೆ ಯೋಚಿಸಿ ನಿರ್ಧಾರವನ್ನು ಕೈಗೊಂಡು ಸನ್ಯಾಸಿ ಬ್ರಾಹ್ಮಣನ ಬಳಿ ಬಂದು ವೇದಾನುಸಾರ ಕ್ಷತ್ರಿಯರಿಗೂ ಬ್ರಾಹ್ಮಣರಿಗೂ ಮದುವೆ ಮಾಡಬಹುದೆಂದೂ, ಮೋಲಾನ ಮೂರು ಜನ ಮಕ್ಕಳಿಗೆ ನಿನ್ನ ಮೂರು ಜನ ಹೆಣ್ಣು ಮಕ್ಕಳನ್ನು ಕೊಟ್ಟು ಮದುವೆ ಮಾಡಲು ಯಾವ ತೊಂದರೆಗಳಿಲ್ಲವೆಂದು ಹೇಳಿ ರಾಧಿಕಾ, ಬ್ರಾಹ್ಮಣ ಕನ್ಯೆಯರಾದ 'ನಾಗರಸಿ', 'ಅಸಾವರಿ' ಹಾಗೂ 'ಬೋಗರಸಿ' ಎಂಬುವರನ್ನು ಕ್ರಮವಾಗಿ ರಾಠೋಡ, ಪವಾರ ಹಾಗೂ ಚವ್ಹಾಣರ ಜೊತೆ ಮದುವೆ ಮಾಡಿಸಿದಳು. ಈ ಮದುವೆಯಿಂದಾಗಿ ಮುಂದೆ ಮೋಲಾನ ಮಕ್ಕಳ ವಂಶ ಬೆಳೆಯಿತು. ಚವ್ಹಾಣನಿಗೆ ಆರು ಜನ ಮಕ್ಕಳು (ಭೋಗೋತ) ಪವಾರನಿಗೆ ಹನ್ನೆರಡು ಜನ ಮಕ್ಕಳು (ಬಾರ್‌ಗೋತ್)

ಹಾಗೂ ರಾಠೋಡನಿಗೆ ಬ್ರಾಹ್ಮಣ ಕನ್ಯೆಯಲ್ಲದೆ ಮತ್ತೊಂದು ವಿವಾಹದಿಂದಾಗಿ ಕ್ರಮವಾಗಿ ೧೩ ಹಾಗೂ ೧೪ ಒಟ್ಟು ೨೭ ಜನ ಮಕ್ಕಳು (ಸತ್ತಾಯಿಸ್ ಪಾಡಾ) ಆದವು. (ಕರ್ನಾಟಕದ ಲಂಬಾಣಿಗಳು: ಖಂಡೋಬಾ; ಪುಟ:೩೧,೩೨;೧೯೯)

ಐತಿಹ್ಯ-೪: ಅರಾವಳಿ ಬೆಟ್ಟ ಪ್ರದೇಶದಲ್ಲಿ ಅನೇಕ ಸಣ್ಣ ಪುಟ್ಟ ರಾಜ ಮನೆತನಗಳಿದ್ದವು. ಮಾರವಾಡದ ಬೈರಗಡ ರಾಠೋಡನ ಮಗ ಲಾಖನ್‌ಸಿಂಗ, ಧಾರರಾಜ್ಯದ ಮಂಜಿನ ಪವಾರನ ಮಗ ಲೋಹಾಸಿಂಗ್ ಪವಾರ ಮತ್ತು ದೆಹಲಿಯ ಕವರಪಾಲ ಆಜನೊಂದಿಗೆ ಬೇಟೆಗೆ ಹೋದರು. ಬೇಟೆ ಆಡುವ ಸಮಯದಲ್ಲಿ ಸುಂದರ ಕನ್ಯೆಯರನ್ನು ಕಂಡು ಅವರು ರಕ್ಷಣೆಗೆ ಯಾರು ಇಲ್ಲದರಿಂದ ಅವರನ್ನು ಪೀಡಿಸಲು ಮುಂದಾದರು. ಅವರನ್ನು ಕಂಡು ದೆಹಲಿಯ ಅರಸ ಕವರಪಾಲನು ಅವರಿಗೆ ವನವಾಸದ ಶಿಕ್ಷೆ ಕೊಟ್ಟನು. ಪಾಂಡವ ಪ್ರಸಾದನ ಮಗನಾದ ಭಾವ ಪ್ರಸಾದ 'ಅಡಿಗೆ ಭಟ್ಟ'ನೊಂದಿಗೆ ಶಿಕ್ಷೆ ಅನುಭವಿಸಲು ರಾಜಕುಮಾರರು ಸಿದ್ಧರಾದರು. ವನವಾಸದಲ್ಲಿ ಅವರು ಆಹಾರ ಹುಡುಕುತ್ತ 'ಖೊಡಪಲ್ಲಿ' ಎಂಬ ಗ್ರಾಮಕ್ಕೆ ಬಂದರು. ಅಲ್ಲಿಂದ ಮುಂದೆ ರಕೋಬನ್, ಘಟ್ಟಕ್ಕೆ ಬಂದರು. ಅಲ್ಲಿ 'ನಾಥಂ' ಎಂಬ ಲಬಾಣ್‌ನ ಪರಿಚಯವಾಯಿತು. 'ನಾಥಂ' ಲಬಾಣನು ನಾಗಾ ಬ್ರಾಹ್ಮಣನ ಮೂವರು ಕನ್ಯೆಯರನ್ನು ತಂದು ಮದುವೆ ಮಾಡಿದನು. ಮುಂದೆ ಲಾಖನ್‌ಸಿಂಗ್‌ನ ಸಂತಾನ ರಾಠೋಡವಾಯಿತು. ಲೋಹಾಸಿಂಗನ್ ಸಂತಾನ ಪವಾರ ಮತ್ತು ರಣಬೀರಸಿಂಗ್‌ನ ಸಂತಾನ ಚವ್ಹಾಣ ಎಂದು ಕರೆಯಿಸಿಕೊಂಡಿತು.[೩೧]

ಐತಿಹ್ಯ-೫: ಮೊಗಲರು ಭಾರತ ದೇಶದ ಆಡಳಿತ ನಡೆಸುವ ಪೂರ್ವದಲ್ಲಿ ಅನೇಕ ಸಣ್ಣ ಪುಟ್ಟ ಸಂಸ್ಥಾನಿಕ ರಾಜರುಗಳು ರಾಜ್ಯಭಾರ ಮಾಡುತ್ತಿದ್ದರು. ಅಂಥವರಲ್ಲಿ ರಜಪೂತ ವಂಶದ ಮೂಲ ಪುರುಷ ರಾಣಾಪ್ರತಾಪಸಿಂಗ್‌ನು ಒಬ್ಬನಾಗಿದ್ದ. ರಾಜಸ್ಥಾನ ಹಾಗೂ ದೆಹಲಿಯ ಕೆಲವು ಪ್ರದೇಶಗಳು ಅವನ ಅಧೀನದಲ್ಲಿದ್ದವು. ಆ ಸಮಯದಲ್ಲಿ ಮೊಗಲರ ಆಳ್ವಿಕೆ ಪ್ರಾರಂಭಗೊಂಡು ಅಕ್ಬರನು ರಾಣಾಪ್ರತಾಪಸಿಂಗ್‌ನ ಉದಯಪುರದ ಮೇಲೆ ದಾಳಿ ಮಾಡಿದನು. ಪರಿಸ್ಥಿತಿಯ ಪ್ರತಿಕೂಲತೆಯನ್ನರಿತ ರಾಣಾ ಪ್ರತಾಪಸಿಂಗ್‌ನು ಅಕ್ಬರನನ್ನು ಎದುರಿಸಲಾಗದೆ 'ಹಳದಿ ಘಾಟ' ಪರ್ವತಕ್ಕೆ ಹೋಗಿ ತಲೆ ಮರೆಸಿಕೊಂಡನು. ಅವನೊಂದಿಗೆ ಅನೇಕ ರಾಷ್ಟ್ರಪ್ರೇಮಿಗಳು ಓಡಿ ಹೋದರು. ಅಕ್ಬರನು ಅಲ್ಲಿಯೂ ದಾಳಿಯನ್ನು ಮುಂದುವರೆಸಿದನು. ರಾಣಾಪ್ರತಾಪನು ಅಕ್ಬರನಿಂದ ಸೋಲನ್ನು ಅನುಭವಿಸಿದನು. ವಿಜಯಶಾಲಿಯಾದ ಅಕ್ಬರನು ಶರಣಾಗತವಾದರೆ ಮರಳಿ ರಾಜ್ಯವನ್ನು ಕೊಡುವುದಾಗಿ ರಾಣಾಪ್ರತಾಪಸಿಂಗ್‌ನಿಗೆ ಸಂದೇಶವನ್ನು ಕಳುಹಿಸಿದನು. ಸ್ವಾಭಿಮಾನಿಯಾದ ರಾಣಾ ಪ್ರತಾಪಸಿಂಗ್‌ನು ಅದಕ್ಕೆ ಒಪ್ಪದೆ ಯುದ್ಧ ಭೂಮಿಯಲ್ಲಿಯೇ ಮರಳಿ ರಾಜ್ಯ ಪಡೆಯುವುದಾಗಿ ಪ್ರತಿಜ್ಞೆ ಮಾಡಿ ಕಾಡನ್ನು ಸೇರಿದನು. ಅವನೊಂದಿಗೆ ಅನೇಕ ಕುಟುಂಬಗಳು ಕಾಡನ್ನು ಸೇರಿದವು. ರಾಣಾ ಪ್ರತಾಪಸಿಂಗ್‌ನನ್ನು ಸೋಲಿಸಲು ಅಕ್ಬರ್ ಅನೇಕ ಪ್ರಕಾರದ ತೊಂದರೆಗಳನ್ನು ಕೊಡತೊಡಗಿದನು. ರಾಜನ ಪ್ರತಿಜ್ಞೆಯೇ ತಮ್ಮ ಪ್ರತಿಜ್ಞೆ ಎಂದು ಪಾಲಿಸಿಕೊಂಡು ಬಂದ ರಜಪೂತ ಕುಟುಂಬಗಳು ಅನೇಕ ರೀತಿಯಲ್ಲಿ ಕಷ್ಟ ನಷ್ಟಗಳನ್ನು ಅನುಭವಿಸಿದವು. ಕೊನೆಗೂ ಅಕ್ಬರನನ್ನು ಎದುರಿಸಲು ಆಗದೆ ರಾಣಾ ಪ್ರತಾಪಸಿಂಗ್‌ನು ಸೋತನು. ಮೊಗಲರ ಹಿಂಸೆಯನ್ನು ಸಹಿಸದೆ ಮಾರವಾಡಿ, ಗುಜರ, ಮುಂತಾದ ರಜಪೂತ ಪಂಗಡಗಳು ನಾಡನ್ನು ಸೇರಿದವು. ಇನ್ನು ಕೆಲವು ಕುಟುಂಬಗಳು ಅಡವಿಯಲ್ಲಿಯೇ ಉಳಿದುಕೊಂಡು ಸಂಚಾರಿ ಜೀವನ ಸಾಗಿಸಿದರು. ಮುಂದೆ ಅವರೇ ಲಂಬಾಣಿಗರೆಂದು ಕರೆಸಿಕೊಂಡರು.[೩೨]

**ಗ್ರಾಂಥಿಕ ಆಧಾರಗಳು**

ಯಾವುದೇ ಒಂದು ಜನಾಂಗದ ಐತಿಹಾಸಿಕ ನೋಟವನ್ನು ತಿಳಿಯುವುದರಲ್ಲಿ ಚಾರಿತ್ರಿಕ ಆಧಾರಗಳು ಮಹತ್ವದಾಗಿರುತ್ತವೆ. ಲಿಪಿ ಇಲ್ಲದಿರುವ ಒಂದು ಭಾಷೆಯಲ್ಲಿ ಇವುಗಳ ಪಾತ್ರ ಇನ್ನೂ ಹಿರಿದಾಗಿರುತ್ತದೆ. ಲಂಬಾಣಿ ಭಾಷೆಗೆ ಲಿಪಿ ಇಲ್ಲದಿರುವುದರಿಂದ ಗ್ರಾಂಥಿಕ ರೂಪದ ಆಧಾರಗಳು ದೊರೆಯುವುದಿಲ್ಲ. ಆದುದರಿಂದ ಲಂಬಾಣಿಗಳನ್ನು ಕುರಿತು ಇತರೆ ಬಾಹ್ಯ ಆಕರಗಳನ್ನು ಶೋಧಿಸಬೇಕಾಗುತ್ತದೆ. ಈ ದಿಶೆಯಲ್ಲಿ ದಂಡಿಯ 'ದಶಕುಮಾರ ಚರಿತೆ' ಯು ಈ ಜನಾಂಗವನ್ನು ಕುರಿತು ಒಂದು ಸಣ್ಣ ಸುಳಿವು ನೀಡುತ್ತದೆ. ಎಚ್.ಎಮ್. ಇಲಿಯಡ್‌ರವರು 'ಬಂಜಾರ ಪದವು ದಂಡಿಯ ದಶಕುಮಾರ ಚರಿತೆಯಲ್ಲಿ ಬರುವ ಪ್ರವತಿ ಕಥೆಯಲ್ಲಿ ಉಲ್ಲೇಖಿತವಾಗಿದೆ' ಎಂದು ಹೇಳುತ್ತಾ, ಪದದ ನಿಷ್ಪತ್ತಿಯು ಪರ್ಶಿಯನ್ ಮೂಲದಲ್ಲಿ ಗುರುತಿಸಲು ಯತ್ನಿಸಿದ್ದಾರೆ.[೩೩] ದಂಡಿಯು ಸಂಸ್ಕೃತ ಸಾಹಿತ್ಯದ ಶ್ರೇಷ್ಠ ಕವಿ. ಆತನ ಕಾಲ ಸುಮಾರು ಕ್ರಿ.ಶ. ೭ ನೇ ಶತಮಾನ ಈ ವೇಳೆಗಾಗಲೇ ಲಂಬಾಣಿ ಜನಾಂಗ ವ್ಯವಸ್ಥಿತವಾಗಿ ಬೆಳವಣಿಗೆಯಾಗಿತ್ತೆಂಬುದು ಇವರಿಂದ ತಿಳಿದುಬರುತ್ತದೆ.

ಗ್ರಿಯರ್‌ಸನ್‌ರವರು ಬರೆದಿರುವ 'Linguistic Survery of India' ಗ್ರಂಥದ ಪ್ರಕಾರ ೭ ನೇ ಶತಮಾನದ ಅಂತ್ಯದಲ್ಲಿ ಬಂಜಾರರ ಬಗ್ಗೆ ಪ್ರಸ್ತಾಪಿಸಲಾಗಿದೆ ಎಂಬ ಅಂಶವು ತಪ್ಪು ಗ್ರಹಿಕೆಯಾಗಿದೆ. ಇವರ ಬಗ್ಗೆ ೧೬೧೨ ರಲ್ಲಿ 'ನಿಯಮತುಲ್ಲಾ' ಬರೆದಿರುವ 'ತಾರಿಖ್-ದಿ-ಖಾನ್-ಎ-ಜಹಾನ್-ಲೂದಿ' ಎಂಬ ಗ್ರಂಥದಲ್ಲಿ ನಮೂದಿಸಲಾಗಿದೆ. ಈ ಗ್ರಂಥವು ೧೫೦೪ ಘಟನೆಗಳಿಗೆ ಸಂಬಂಧಿಸಿದ್ದಾಗಿದೆ. ಈ ಗ್ರಂಥದಲ್ಲಿ ತಿಳಿಸಿರುವಂತೆ ಬಂಜಾರರು ಆಗಮಿಸದೆ ಇದ್ದುದರಿಂದ ಸೈನಿಕ ಶಿಬಿರಗಳಲ್ಲಿ ಆಹಾರದ ಕೊರತೆ ಉಂಟಾಗಿ ಸುಲ್ತಾನರು ಹೆದರಿ ಅಜಂ ಹುಮಾಯನ್ ಎಂಬುವವನನ್ನು ಈ ಕಾರ್ಯಕ್ಕಾಗಿ ಕಳುಹಿಸುತ್ತಾನೆ ಎಂಬುದಾಗಿ ತಿಳಿದು ಬರುತ್ತದೆ.[೩೪] ಈ ಹೇಳಿಕೆಯಿಂದ ೧೫೦೪ ರ ವೇಳೆಗೆ ಬಂಜಾರರನ್ನು ಸ್ಪಷ್ಟವಾಗಿ ಗುರುತಿಸಲಾಗಿದ್ದು ಅವರ ವೃತ್ತಿಯು ಸೈನಿಕ ಶಿಬಿರಗಳಿಗೆ ಆಹಾರ ಸರಬರಾಜು ಮಾಡುವುದಾಗಿದ್ದಿತು ಎಂಬ ಅಂಶ ತಿಳಿದು ಬರುತ್ತದೆ.

**ಪ್ರವಾಸಿ ಬರಹಗಾರರ ಆಧಾರಗಳು :**

ಭಾರತದ ಇತಿಹಾಸದಲ್ಲಿ ವಿದೇಶಿ ಪ್ರವಾಸಿಗರ ಕೊಡುಗೆ ಅತ್ಯಮೂಲ್ಯವಾದುದು. ದೇಶಿಯ ಆಧಾರಗಳು ಐತಿಹಾಸಿಕ ವಿವರಣೆ ನೀಡುವುದರಲ್ಲಿ ವಿಫಲವಾದಾಗ ನಾವು ವಿದೇಶಿ ಪ್ರವಾಸಿಗರ ಆಕರಗಳಿಗೆ ಮೊರೆ ಹೋಗುವುದು ಸರ್ವ ಸಾಮಾನ್ಯ. ಈ ಆಕರಗಳಲ್ಲಿ ವಿದೇಶಿಯರು ತಾವು ಬೇಟಿ ನೀಡಿದ್ದ ತಾವು ಕಂಡು ಕೇಳಿದ್ದನ್ನು ರಾಗದ್ವೇಷವಿಲ್ಲದೇ ಯಥಾವತ್ತಾಗಿ ಬರೆದಿರುವುದರಿಂದ ಇವು ಹೆಚ್ಚಿನ ನಂಬಿಕೆಗೆ ಪಾತ್ರವಾಗಿರುತ್ತವೆ. ಇಕ್ಸಿಂಗ್, ಫಾಹಿಯಾನ್, ಹುಯನ್-ತ್ಸಾಂಗ್, ನಿಕೊಲೋಕೊಂಟಿ, ಬಾರ್ಬೋಸ, ಅಬ್ದುಲ್ ರಜಾಕ್ ಮುಂತಾದ ವಿದೇಶಿಯರು ಪ್ರಾಚೀನ ಭಾರತದಿಂದಲೂ ಭಾರತಕ್ಕೆ ಬೇಟಿ ನೀಡುತ್ತಾ ಬಂದಿದ್ದು, ಅವರ ಗ್ರಂಥಗಳು ಭಾರತದ ಇತಿಹಾಸ ರಚನೆಗೆ ಹೆಚ್ಚು ಮಹತ್ವಪೂರ್ಣವಾದ ಆಕರಗಳಾಗಿವೆ. ಅಂತೆಯೇ ಹೆಚ್ಚು ಮಹತ್ವಪೂರ್ಣವಾದ ಮಾಹಿತಿಗಳನ್ನು ಲಂಬಾಣಿ ಬುಡಕಟ್ಟಿನ ಬಗ್ಗೆ ಒದಗಿಸುತ್ತವೆ. ಈ ಬುಡಕಟ್ಟಿನ ಬಗ್ಗೆ ತಿಳಿಯಲು ಉಪಯುಕ್ತವಾದ ಮಾಹಿತಿಗಳಾಗಿವೆ.

ಕ್ರಿ.ಶ. ೧೬೨೮ರಲ್ಲಿ ಭಾರತಕ್ಕೆ ಭೇಟಿ ನೀಡಿದ್ದ 'ಪೀಟರ್' ಮಂಡಿಯು ತಿಳಿಸುವಂತೆ ''ಹೋಗುವ ದಾರಿಯಲ್ಲಿ ಬುರಾನ್‌ಪುರಕ್ಕೆ ದವಸ ಧಾನ್ಯಗಳನ್ನು ಸಾಗಿಸುವ ಹೇರಿತ್ತು. ಹೇರು ಕೋಣಗಳನ್ನು ಹೊಡೆದುಕೊಂಡು ಹೋಗುತ್ತಿದ್ದು, ಅನೇಕ ಬಣಜಾರರನ್ನು ಕಂಡೆವು ಮುಂದುವರೆದು ಅವರು ಮತ್ತೊಂದು ಅನುಭವವನ್ನು ವಿವರಿಸುತ್ತಾ, ''ಅಗಸ್ಟ ೨೩ ರಂದು ನಮಗೆ ಒಂದು ತಾಂಡಾ, ಅಂದರೆ ಎತ್ತುಗಳ ಬಣಜಾರ ಸಿಕ್ಕಿತು. ತಾಂಡದಲ್ಲಿ ೧,೪೦೦ ಎತ್ತುಗಳಿದ್ದವು. ಗೋಧಿ, ಅಕ್ಕಿ ಮುಂತಾದ ದವಸಗಳನ್ನು ಅವುಗಳ ಮೇಲೆ ಹೇರಿದ್ದರು. ಒಂದೊಂದು ಎತ್ತಿನ ಮೇಲೆ ನಾಲ್ಕು ದೊಡ್ಡ ಮಣಗಳ ಹೇರು ಇತ್ತು. ಇವೆಲ್ಲಾ ಆಗ್ರಾಕ್ಕೆ ಹೋಗುತ್ತಿದ್ದವು. ಈ ಬಣಜಾರರು ತಮ್ಮ ಹೆಂಡತಿ ಮಕ್ಕಳು, ಸಾಮಾನು ಸರಂಜಾಮುಗಳ ಸಮೇತ ಹೋರಡುತ್ತಾರೆ. ಇವರು ಒಂದು ಕಡೆ ನಿಲ್ಲದೇ ಊರಿಂದೂರಿಗೆ ಹೋಗುತ್ತಿರುತ್ತಾರೆ. ಇವರು ಗಟ್ಟಿಮುಟ್ಟಾದ ಜನ, ಸಂದರ್ಭ ಬಂದರೆ ಹೆಂಗಸರೂ ಗಂಡಸರಂತೆ ಹೋರಾಡ ಬಲ್ಲರು. ದಿನಾ ತಂಪು ಹೊತ್ತಿನಲ್ಲಿ ಆರೇಳು ಮೈಲಿಗಳಂತೆ ದಾರಿ ಸಾಗಿಸುತ್ತಾರೆ. ತಂಗಿದಾಗ ಹೇರಿದ ಸಾಮಗ್ರಿಗಳನ್ನು ಇಳಿಸಿ ಎತ್ತುಗಳನ್ನು ಮೇಯಲು ಬಿಡುತ್ತಾರೆ.''

ಲೇಖಕರು ಈ ವಿವರಣೆಯಲ್ಲಿ ಲಂಬಾಣಿ ಬುಡಕಟ್ಟಿನ ಬದುಕು, ವ್ಯಾಪಾರ ವಿಧಾನ, ತಿಳಿಸುವುದರ ಜೊತೆಗೆ ಪುರುಷರು ಮತ್ತು ಮಹಿಳೆಯರ ಸ್ವಭಾವವನ್ನು ವಿವರಿಸುವುದರೊಂದಿಗೆ ಈ ಬುಡಕಟ್ಟಿನ ಜನರ ಬಗೆಗೆ ಅತ್ಯಮೂಲ್ಯವಾದ ಮಾಹಿತಿಯನ್ನು ನೀಡಿದ್ದಾರೆ.

ಫ್ರಾನ್ಸಿಸ್ ಬೆಕಿನ್ನೋಯವರು ಔರಂಗಜೇಬ್ ಮತ್ತು ದಾರಾನಿಗೂ ಕ್ರಿ.ಶ. ೧೬೫೮ ರಿಂದ ೧೬೬೭ರ ವರೆಗೆ ನಡೆದ ಯುದ್ಧದ ಕುರಿತು ವಿವರಿಸುತ್ತಾ ಇಷ್ಟವಿಲ್ಲದೇ ಸೈನ್ಯವನ್ನು ಹಿಂಬಾಲಿಸಿಕೊಂಡು ಹೋಗುವ ಬಣಜಾರರ ವರ್ತಕರು ಅಸಂಖ್ಯಾತರಿದ್ದರು ಎಂಬ ಮಾತನ್ನು ಹೇಳುತ್ತಾರೆ.[೨೭]

ಈ ವಿವರಣೆಯಿಂದ ಲಂಬಾಣಿ ಸಮುದಾಯ ಸೈನ್ಯಕ್ಕೆ ಆಹಾರ ಸರಬರಾಜು ಮಾಡುತ್ತಿದ್ದರೆಂದು ತಿಳಿದು ಬರುತ್ತದೆ. ಹೀಗೆ ವಿದೇಶಿಯರ ಬರವಣಿಗೆಗಳಿಂದ ಲಂಬಾಣಿ ಜನಾಂಗದ ಸ್ಥಿತಿಗತಿಗಳನ್ನು ತಿಳಿಯಲು ಬಹಳಷ್ಟು ಸಹಕಾರಿಯಾಗುತ್ತದೆ. ಒಟ್ಟಾರೆಯಾಗಿ ಈ ಲಂಬಾಣಿ ಸಂಸ್ಕೃತಿ ಒಂದು ವಿಶೇಷ ಸಂಸ್ಕೃತಿಯಾಗಿದ್ದು, ಅದರ ಉಗಮ, ಮೂಲ, ಪ್ರಸರಣ, ವಲಸೆ, ಸಾಕಷ್ಟು ಶೋಚನೀಯವಾಗಿರುವುದು ಕಂಡು ಬರುತ್ತದೆ. ಅಧ್ಯಯನಕ್ಕೆ ಲಿಖಿತ ಆಕರಗಳು ಲಭ್ಯವಾಗಿರದೇ ಇರುವುದು ಸಮಸ್ಯೆಯಾದರೂ ಮೌಖಿಕ ಆಕರಗಳ ಸಹಾಯದಿಂದ ಮತ್ತು ಐತಿಹ್ಯಗಳ ಸಂಯೋಗದಿಂದ ಸಾಕಷ್ಟು ಉತ್ಕೃಷ್ಟವಾದ ಸಾಂಸ್ಕೃತಿಕ ಅಧ್ಯಯನ ಮಾಡಬಹುದಾಗಿದೆ.

■

# ಅಧ್ಯಾಯ - ೪

## ಲಂಬಾಣಿಭಾಷೆ : ಸ್ವರೂಪ ಮತ್ತು ಪರಿಚಯ

ಭಾರತವು ಬಹು ಭಾಷೆಯಿಂದ ಕೂಡಿದ ರಾಷ್ಟ್ರ. ಕೆಲವು ಲಿಪಿ ಸಹಿತ ಮತ್ತು ಕೆಲವು ಲಿಪಿರಹಿತ ಭಾಷೆಗಳು ನಮ್ಮಲ್ಲಿವೆ. ಅವುಗಳಲ್ಲಿ ಅನೇಕ ಭಾಷೆಗಳಿಗೆ ಲಿಪಿಯೇ ಇಲ್ಲ. ಕ್ರಿಶ್ಚಿಯನ್ ಮಿಷನರಿಯವರು ಕೆಲವು ಬುಡಕಟ್ಟು ಜನರ ಭಾಷೆಗೆ ಲಿಪಿಯನ್ನು ಸೃಷ್ಟಿಸಿ, ಅವರ ಭಾಷೆಗೆ ನಿಘಂಟು ಮತ್ತು ವ್ಯಾಕರಣ ಬರೆದರು. ಉದಾಹರಣೆಗೆ 'ಓರಾನ್' ಭಾಷೆಗೆ ವ್ಯಾಕರಣ ಮತ್ತು ಶಬ್ಧಕೋಶವನ್ನು ರೆಮಿರೆಂಡ್ ಫಾದರ್, ಬಾಟ್ಸಚ್ ಎಂಬುವರು ೧೮೬೯ರಲ್ಲಿ ಏಷಿಯಾಟಿಕ್ ಜನರಲ್ ಸಂಪುಟ ೩೫ ಪಾರ್ಟ ೧೧ ರಲ್ಲಿ ಪ್ರಕಟಿಸಿದ್ದಾರೆ. ಆ ಮೇಲೆ ರೆವರೆಂಡ್ಫಾದರ್,ಹಾನ್ಫಾದರ್, ಗ್ರಿಗ್ನಾರತ್ ಮತ್ತು ಇತರರು ಓರಾನ್ ಭಾಷೆಗೆ ವ್ಯಾಕರಣ ಬರೆದು ಅದನ್ನೂ ರೋಮನ್ ಲಿಪಿಯಲ್ಲಿ ಬರೆಯುವುದನ್ನು ರೂಡಿಗೆ ತಂದರು. ಡಾ. ಎಂ. ನೋಟ್ರೋಟ್ ಫಾದರ್ ಹಾಷಮನ್ ಮತ್ತು ಇತರರು 'ಮುಂಡಾರಿ' ಭಾಷೆ ಕುರಿತು ಅಪಾರ ಶ್ರಮವಹಿಸಿದ್ದಾರೆ. ಹಾಗೆಯೇ 'ಬೋಂಡಿಗ್' ಎಂಬುವರು ಸಂತಾಲರ ಭಾಷೆಗೆ ವ್ಯಾಕರಣ ಮತ್ತು ನಿಘಂಟು ರೂಪಿಸಿದ್ದಾರೆ. ಈಶಾನ್ಯ ಪ್ರಾಂತ್ಯದ ಬುಡಕಟ್ಟು ಸಮುದಾಯಗಳೆಂದರೆ ನಾಗಾ, ಖಾಸಿ, ಮಿಜೋ, ಮೊದಲಾದವರ ಭಾಷೆಗಳಿಗೆ ಕ್ರಿಶ್ಚಿಯನ್ ಚರ್ಚು ಮತ್ತು ಮಿಷನರಿಗಳ ಸತತ ಪ್ರಯತ್ನದಿಂದ ವ್ಯಾಕರಣ, ನಿಘಂಟು ಇತ್ಯಾದಿಗಳು ರೂಪಗೊಂಡಿವೆಯೆನ್ನಬಹುದು.[೧]

ಮಿಷನರಿಗಳು ನೇರ ಸಂಪರ್ಕದಿಂದ ಬುಡಕಟ್ಟು ಜನಾಂಗಗಳ ಸಂಸ್ಕೃತಿಯ ಮೇಲೆ ಪ್ರಭಾವ ಬೀರಿರುವುದು ಸ್ವಾಭಾವಿಕವಾಗಿತ್ತು. ಪಾಶ್ಚಿಮಾತ್ಯರಿಗೆ ನಾವು ಪ್ರಪಂಚದ ಎಲ್ಲಾ ಜನಾಂಗಗಳಿಗಿಂತಲೂ ಶ್ರೇಷ್ಠರು ಎಂಬ ಭಾವನೆ ಎಂದಿನಿಂದಲೂ ಇತ್ತು. ಮಿಷನರಿಗಳ ಕುರಿತು ಸರದಾರ ಕೆ.ಎಮ್. ಫಣಿಕರ್ ಅವರು ಈ ರೀತಿ ಹೇಳಿದ್ದಾರೆ. ''ಮಿಷನರಿಗಳು ಎಲ್ಲ ರೀತಿಯಲ್ಲಿಯೂ ಅದರಲ್ಲೂ ನೈತಿಕವಾಗಿ ಬಹಳ ಉತ್ತಮರು ಮತ್ತು ತಮ್ಮ ಪ್ರತ್ಯಕತೆಯ ಬಗ್ಗೆ ಉದ್ಧಾತ ಭಾವನೆಗಳನ್ನು ಹೊಂದಿದ್ದರು''ಎಂದಿದ್ದಾರೆ. ಅಂದರೆ ಎಲ್ಲರಿಗಿಂತ ಉತ್ತಮ ಜನಾಂಗವೆಂಬ ಭಾವನೆ ಮಿಷನರಿಗಳದಾಗಿತ್ತು. ಅವರಿಗೆ ಬುಡಕಟ್ಟು ಸಂಸ್ಕೃತಿಯಲ್ಲಿ ಒಳ್ಳೆಯದೇನೂ ಗೋಚರವಾಗಲಿಲ್ಲ. ಮಿಷನರಿಗಳಿಗೆ ಬುಡಕಟ್ಟು ಜನಾಂಗಗಳ ಸಂಸ್ಕೃತಿ, ಭಾಷೆ, ಕಲೆ ಮುಂತಾದವುಗಳ ಬಗ್ಗೆ ನಿರ್ಲಕ್ಷ್ಯ ವಹಿಸಿದರು, ಹಾಗೇ ಅನೇಕ ವಿದೇಶಿಯರು ಹತ್ತು ಹಲವಾರು ಕ್ಷೇತ್ರದಲ್ಲಿ ಅಧ್ಯಯನಮಾಡಿ ಪೂರ್ವ ಪೀಠಿಕೆ ಹಾಕಿಕೊಟ್ಟಿದ್ದಾರೆ.[೨]

ಸುಮಾರು ನೂರು ಕೋಟಿಗಿಂತಲೂ ಹೆಚ್ಚು ಜನಸಂಖ್ಯೆಯಿರುವ ಭಾರತ ದೇಶದಲ್ಲಿ ಸಾವಿರಾರು ಉಪಭಾಷೆಗಳು ಬಳಕೆಯಲ್ಲಿವೆ. ಇಷ್ಟೊಂದು ಭಾಷೆಗಳನ್ನು ಕುಟುಂಬವಾರು ವರ್ಗೀಕರಿಸಿ ವಿದ್ವಾಂಸರು ಕೆಲಸ ಮಾಡಿದ್ದಾರೆ. ೧೮೮೯ರ ಸುಮಾರಿಗೆ ಗ್ರಿಯರ್ಸನ್‌ರವರು ಭಾರತೀಯ ಭಾಷೆಗಳ ಸರ್ವೇಕ್ಷಣೆಯನ್ನು ಆರಂಭಿಸಿದರು. ಅಲ್ಲದೆ ಸುನೀತಕುಮಾರ ಚಟರ್ಜಿ, ಸುಕುಮಾರಸೇನ್, ತಾರಾಪುರವಾಲಾ, ಸಿದ್ದೇಶ್ವರಶರ್ಮ, ನೇತಾರಾಮ ಚತುರ್ವೇದಿ ಮುಂತಾದವರು ಪ್ರಯತ್ನ ಪಟ್ಟಿದ್ದಾರೆ. ಇದಲ್ಲದೆ ಜಗತ್ತಿನ ಬೇರೆ ಬೇರೆ ದೇಶಗಳಲ್ಲಿ ವಿದ್ವಾಂಸರು ಭಾರತೀಯ ಭಾಷೆಗಳನ್ನು ಕುಟುಂಬವಾರು ವಿಂಗಡಿಸುವ ಪ್ರಯತ್ನ ಮಾಡಿದ್ದಾರೆ. ಇವರೆಲ್ಲರ ಪ್ರಯತ್ನದಿಂದ ಭಾರತೀಯ ಭಾಷೆಗಳನ್ನು ಈ ಕೆಳಗಿನಂತೆ ಸ್ಥೂಲವಾಗಿ ವರ್ಗೀಕರಿಸಲಾಗಿದೆ. ೧. ಇಂಡೋ-ಆರ್ಯನ್ ಭಾಷಾ ಪರಿವಾರ್ ೨. ದ್ರಾವಿಡ ಭಾಷಾ ಪರಿವಾರ್ ೩. ಆಸ್ಟ್ರಿಕ್ ಅಥವಾ ಆಸ್ಟ್ರೊ ಏಷಿಯಾಟಿಕ್ ಪರಿವಾರ್ ೪. ಟಿಬೆಟೋ ಬರ್ಮನ್ ಭಾಷಾ ಪರಿವಾರ್ ೫. ಅವರ್ಗೀಕೃತ ಭಾಷಾ ಪರಿವಾರ್

ಈ ರೀತಿ ವಿಂಗಡಿಸಿ ಪ್ರತ್ಯೇಕವಾದ ಭಾಷಾ ಪರಿವಾರಗಳ ಕುರಿತು ಅಧ್ಯಯನಮಾಡಿ ಆಯಾ ಗುಂಪಿಗೆ ಸೇರಿದ ಭಾಷೆಯ ಲಕ್ಷಣ, ವೈಶಿಷ್ಟ್ಯಗಳನ್ನು ಗುರುತಿಸಲಾಗಿದೆ. ಇಂಡೋಆರ್ಯನ್ ಭಾಷಾ ಪರಿವಾರಕ್ಕೆ ಸೇರಿದ ಲಂಬಾಣಿ ಭಾಷೆ ಕುರಿತು ಇಲ್ಲಿ ಚರ್ಚಿಸಲಾಗುವುದು, ಇಂಡೋ-ಆರ್ಯನ್ ಭಾಷಾ ಪರಿವಾರಕ್ಕೆ ಸೇರಿದ ಭಾಷೆ ಉಪಭಾಷೆಗಳು ಭಾರತದಲ್ಲಿ ಅಧಿಕವಾಗಿವೆ. ಇವುಗಳನ್ನು ಈ ಕೆಳಗಿನಂತೆ ವರ್ಗೀಕರಿಸಬಹುದು. ೧. ಪ್ರಾಚೀನ ಇಂಡೋ-ಆರ್ಯನ್ ಭಾಷೆಗಳು ೨. ಮಧ್ಯಕಾಲೀನ ಇಂಡೋ-ಆರ್ಯನ್ ಭಾಷೆಗಳು. ೩. ಆಧುನಿಕ ಇಂಡೋ-ಆರ್ಯನ್ ಭಾಷೆಗಳು

**೧. ಪ್ರಾಚೀನ ಇಂಡೋಆರ್ಯನ್ ಭಾಷೆಗಳು.**

ಪ್ರಾಚೀನ ಇಂಡೋ-ಆರ್ಯನ್ ಭಾಷೆಗಳಲ್ಲಿ ಮುಖ್ಯವಾಗಿ ವೇದ, ಸಂಸ್ಕೃತ ಮತ್ತು ಲೌಕಿಕ ಸಂಸ್ಕೃತ ಪ್ರಮುಖವಾದದ್ದು. ಪ್ರಾಚೀನ ಭಾರತದ ಎಲ್ಲ ಸಾಹಿತ್ಯಿಕ, ಸಾಂಸ್ಕೃತಿಕ ಚಟುವಟಿಕೆಗಳ ಜೀವಾಳವಾಗಿದ್ದ ವೇದಗಳ ಸಂಸ್ಕೃತ ಇಂದು ಬಳಕೆಯಲ್ಲಿ ಉಳಿದಿಲ್ಲ. ಇದರಿಂದ ವಿಕಾಸಗೊಂಡ ಭಾಷೆ ವೇದಗಳ ಸಂಸ್ಕೃತದಿಂದ ಬೆಳದು ಬಂದಿರುವುದನ್ನು ಪಾಣಿನಿಯು ವಿವರವಾಗಿ 'ಅಷ್ಟಧ್ಯಾಯಿ' ಎಂಬ ತನ್ನ ಕೃತಿಯಲ್ಲಿ ಚರ್ಚಿಸಿದ್ದಾನೆ. ಕ್ರಿ.ಪೂ. ೫ ನೇಯ ಶತಮಾನದ ವೇಳೆಗೆ ಸಾಹಿತ್ಯ ಚಟುವಟಿಕೆಗಳು ನಡೆಯುತ್ತಿದ್ದುದಾಗಿಯೂ ತಿಳಿಸಿದ್ದಾರೆ. ಗ್ರಿಯರ್ಸನ್, ವೇಬರ್, ಗಾರ್ನೆಲ್ ಮುಂತಾದವರು ಸಂಸ್ಕೃತವೂ ಸಾಹಿತ್ಯಕ ಭಾಷೆಯಾಗಿ ಮಾತ್ರ ಬಳಕೆಯಲ್ಲಿತ್ತು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಭಂಡಾರಕರ್ ಮುಂತಾದ ವಿದ್ವಾಂಸರು ಜನಸಾಮಾನ್ಯರ ಭಾಷೆಯಾಗಿಯೂ ಬಳಕೆಯಲ್ಲಿತ್ತು ಎಂದು ಅಭಿಪ್ರಾಯ ಪಡುತ್ತಾರೆ.

**೨. ಮಧ್ಯಕಾಲೀನ ಇಂಡೋ-ಆರ್ಯನ್ ಭಾಷೆಗಳು**

ಮಧ್ಯಕಾಲಿನ ಇಂಡೋ-ಆರ್ಯನ್ ಭಾಷೆಗಳಲ್ಲಿ ಪಾಳೀ, ಪ್ರಾಕೃತ ಮತ್ತು ಅಪಭ್ರಂಶ ಭಾಷೆಗಳನ್ನು ಗುರುತಿಸಲಾಗಿದೆ. ಇವು ವೇದ ಸಂಸ್ಕೃತ ಅಥವಾ ಲೌಕಿಕ ಸಂಸ್ಕೃತಗಳಿಂದ ಹುಟ್ಟಿ ವಿಕಾಸವಾದವುಗಳಾಗಿವೆ. ಸಂಸ್ಕೃತ, ಪ್ರಾಕೃತ ಭಾಷೆಗಳು ಬೇರೆ ಬೇರೆ ಧಾರ್ಮಿಕ ಆಚರಣೆ ಮತ್ತು ಪ್ರಚಾರಕ್ಕೆ ಬಳಕೆಯಾಗಿರುವುದು ಇತಿಹಾಸದಿಂದ

**ಪದಾಂತ್ಯ 'ಸ್' ವ್ಯಂಜನ ಧ್ವನಿಮಾ :**

| | |
|---|---|
| ಆಳಸ್ | ಸೋಮಾರಿ |
| ಆಟಸೇ | ಎಂಟ್ನೂರು |
| ಆಸಾ | ಆಸೆ |
| ಆರಸಿ | ಕನ್ನಡಿ |
| ಕಸ್‌ಕಸ್ | ಗಸಗಸೆ |
| ಕಸೋ | ಎಂತಹದು |
| ಕೊಣಸೋ | ಯಾವುದು |
| ಕೊಣಸ್ | ಯಾವ |
| ಖಾಸಿ | ಕೆಮ್ಮು |
| ಖೀಸೋ | ಬಕ್ಕಣ |
| ಫುಸ್ | ತಿಕ್ಕು |
| ಘುಸ್ಸಾ | ಸೆಂಟ |
| ಜನಸ್ | ವಸ್ತು |
| ನಸ್ | ನರ |
| ಭೇಂಸಿ | ಎಮ್ಮೆ |
| ರಸ್ಸೋ | ರಸ |
| ಲಾಪಸಿ | ಪಾಯಸ |
| ವಾಂಸ್ | ವಾಸನೆ |
| ವರಸ್ | ವರ್ಷ |
| ವಸ್ | ಮಂಜು |
| ಸಸಿಯಾ | ಮೊಲ |
| ಮಸ್ಸೋ | ಕುರು |
| ವಾಂಸಿ | ತಂಗಳು |
| ವೀಸ್ | ಇಪ್ಪತ್ತು |

ಪದಮಧ್ಯ ಮತ್ತು ಪದಾಂತ್ಯದಲ್ಲಿ ಬಳಕೆ ಇಲ್ಲ.

**ಪದಾದಿ 'ಹ' ವ್ಯಂಜನ ಧ್ವನಿಮಾ :**

| | |
|---|---|
| ಹಡಕಾ | ಎಲುಬು |
| ಹರ್‌ಕೇರಿ | ಸಿಕ್ಕಿದವರ |
| ಹರೇಗಾರ್ | ಹಚ್ಚ ಹಸಿರು |
| ಹಸಾಬ್ | ಲೆಕ್ಕಪತ್ರ |
| ಹಣ್ಣಿ | ಜಿಂಕೆ |

| | |
|---|---|
| ಹಡ್ಕ | ಎಲುಬು |
| ಹಣ್‌ಜಾ | ಹಣೆಸು |
| ಹಕ್ಮತಿ | ಬುದ್ಧಿವಂತ |
| ಹರ್‌ಕೊಯಿ | ಅಪರಿಚಿತ |
| ಹರ್ದಾವ್‌ಜಕೋ | ನೆನಪಿಗೆ ಬರುವ |
| ಹಪ್ತಿ | ಸಮಯ |
| ಹಮ್‌ನೂನ್ | ನಮಗೆ |
| ಹರಾ | ಸೋಲಿಸು |
| ಹನುಚ್ | ಹಾಗೆ |
| ಹಕಾರ್ | ಕೂಗು |
| ಹಳದ್ | ಅರಶಿಣ |
| ಹರ್‌ದೆಮ್ | ನೆನಪಿನಲ್ಲಿ |
| ಹತೇಳಿ | ಅಂಗೈ |
| ಹಣೂತ್ | ಮಂಗ |
| ಹರಾಮಿ | ದುಷ್ಟ |
| ಹಣಜಾ | ಹಣೆಸು |
| ಹವೇಲಿ | ಮದುವೆಯಲ್ಲಿ ಬಿಳ್ಕೊಡುಗೆಯ ಹಾಡು |

**ಪದಾದಿ 'ಲ' ವ್ಯಂಜನ ಧ್ವನಿಮಾ :**

| | |
|---|---|
| ಲವಾರ್ | ಕಮ್ಮಾರ |
| ಲಖಿಭಖಿ | ಹಣೆಬರಹ |
| ಲಟ್ಟಾ | ಕೂದಲು |
| ಲಂಗ್ಡೊ | ಕುಂಟ |
| ಲವಡಾ | ಶಿಶ್ನ |
| ಲಬಾರ್ | ಸುಳ್ಳು |
| ಲಾತ್ | ಒದೆ |
| ಲಂಗಡ್ | ಕುಂಟು |
| ಲಾಂಬಡಿ | ಒಂದು ಬಗೆಯ ಹುಲ್ಲು |
| ಲಾರೇರ್‌ದಾಡ್ | ಮಾರನೆದಿನ |
| ಲೇಕೊ | ಲೆಕ್ಕಪತ್ರ |

**ಪದಮಧ್ಯ 'ಲ' ವ್ಯಂಜನ ಧ್ವನಿಮಾ :**

| | |
|---|---|
| ಆಲುಗಡ್ಡ | ಆಲೂಗಡ್ಡೆ |
| ಕಲ್ಡೊಥಟ್ಟ | ಬಿರುಸಾದ |

| | |
|---|---|
| ದಲ್‌ಮಲ್ | ನಿರ್ಗಳವಾಗಿ |
| ಪಾಲ್ತಾಣೆರೊ | ಹಂದರ ಹಾಕುವುದು |
| ಕುಲ್ಲರ್ | ಗೋಧಿ ಹಿಟ್ಟಿಗೆ ಬೆಲ್ಲ ಬೆರಸಿ ಮಾಡಿರುವ ಪದಾರ್ಥ |
| ಕೊಲ್ಡಿ | ಮಡಕೆ |
| ಗಲತಿ | ತಪ್ಪು |
| ಗಲವಾಣಿ | ಬೆಲ್ಲದ ಪಾನಕ |
| ಘಾಲೇನ್ | ಹಾಕುವುದಕ್ಕೆ |
| ಚಲ್ಕೋಡಿ | ಗುಬ್ಬಿ |
| ಜೇಡೆಲಗೂ | ಬೇರು ಸಹಿತ |
| ಝುಲ್‌ಕಿ | ಝುಳಪಿಸು |
| ಡಿಲೋಭೋಡ್ | ಸಡಿಲ ಬಿಡು |
| ತಕಲೀಪ್ | ತೊಂದರೆ |
| ದಲೇರ್ | ಮನಸ್ಸಿನ |
| ದೇಸೇಲಾರ್ | ದೇಶದಂತೆ |
| ನಾಬಾಲಕ್ | ಕೂಸು |
| ಪಾಲಣೊ | ತೊಟ್ಟಿಲು |
| ಭರ್ಲಾಯಿ | ತುಂಬಿಕೊಂಡು |
| ಮಲನ್ | ಸೇರು |
| ಲಾಲ್‌ಕಿಡಿ | ಕೆಂಪು ಇರುವೆ |
| ಗಲೀಜ್ | ಹೊಲಸು |

ಪದಾಂತ್ಯ 'ಲ' ವ್ಯಂಜನ ಧ್ವನಿಮಾ :

| | |
|---|---|
| ಆಮಲಿ | ಹುಣಸೆ |
| ಅರೆಂಡೆರ್‌ತೇಲ್ | ಔಡಲು ಎಣ್ಣೆ |
| ಅಳ್‌ಸಿಲೋ | ಮೈಗಳ್ಳ |
| ಉಂಚಾಲ್ | ಮೇಲಿನಿಂದ |
| ವೇಲ್ | ಬಳ್ಳಿ |
| ಕಾಲ್ವಾ | ಕಾಲುವೆ |
| ಕಾಗ್‌ಲಾ | ಕಾಗೆ |
| ಕಿಲ್ಲೋ | ಕೊಡೆ |
| ಕಲ್ಡಿ | ಕುಡಿಕೆ |
| ಗಲ್ | ನುಂಗು |

| | |
|---|---|
| ಖಿಲ್ಡಿ | ರಂಧ್ರ |
| ಗರೇಲಿ | ಅಳಿಲು |
| ಗದ್‌ಗಲಾ | ದುಂಡಗಿನ |
| ಗಾಲಾ | ಸಿಂಬಿ |
| ಗಾಲ್ | ಕೆನ್ನೆ |
| ಘಲಾ | ಹಾಕಿಸು |
| ಘಾಲ್ | ಹಾಕು |
| ಘಾಲೇರ್ | ಹಾಕುವ |
| ಘಾಲೇನ್ | ಹಾಕುವುದಕ್ಕೆ |
| ಚಾಲ್ | ನಡೆ |
| ಚಪ್ಪಲ್ಲ್ | ಚಪ್ಪಲಿ |
| ಛೋಲ್ | ಸುಲಿ |
| ಜಲ್ದಿ | ಬೇಗ |
| ಜಗಲಾ | ಅಂಗಿ |
| ಝುಲ್ | ಹಿಡಿ |
| ಜೇಲ್ | ಜೈಲು |
| ಢಾವ್‌ಲೊ | ಅಳುವ ಹಾಡು |
| ತೊಲ್ | ತೂಕ |
| ದಖೇಲ್ | ಉರುಳಿಸು |
| ಪೇಲೊ | ಮೊದಲು |
| ಫೂಲ್ | ಹೂವು |
| ಪಾಲೋ | ಸೊಪ್ಪು |
| ಫೇಲಾ | ಪಸರಿಸು |
| ಬಂದಾಲ | ಕಟ್ಟಿಸಿಕೊಳ್ಳು |
| ಬಂಗ್ಲಾ | ಕೊಕ್ಕರೆ |
| ಬಲಾ | ಕರೆ |
| ಬಲ್ಲಾ | ಕೆಟ್ಟದು |
| ಬೋಲ್ | ವಚನ, ಮಾತು |

'ಳ' ಕಾರ ಧ್ವನಿಮಾ ಪದಾದಿಯಲ್ಲಿ ಬರುವುದಿಲ್ಲ. ಪದಮಧ್ಯ ಮತ್ತು ಪದಾಂತ್ಯದಲ್ಲಿ ಮಾತ್ರ ಬರುತ್ತದೆ.

ಪದಮಧ್ಯ 'ಳ' ಕಾರ ಧ್ವನಿಮಾ :

| | |
|---|---|
| ಆಳ್ಸು | ಮೈಗಳ್ಳತನ |
| ಒಳ್‌ಸೂಳ್ | ಅಂಕುಡೊಂಕು |

| | |
|---|---|
| ಒಳಕ್ | ಪರಿಚಯ |
| ಕಸ್ಳಾತ್ | ಯೋಗಕ್ಷೇಮ |
| ಕಳಜೋ | ಹೃದಯ |
| ಇಳ್ತಿ | ಇಳಗಿ |
| ಕಳಂಕಿ | ಜಗಳಗಂಟಿ |
| ಕಾಳೊಸೋ | ಕಪ್ಪಾದ |
| ದಾತ್ಳಾತಿ | ಕೂಡುಗೊಲಿನಿಂದ |
| ದೇವಳೆಮ್ | ಗರ್ಭಗುಡಿ |
| ಕಾಳಿಮರ್ಚೆ | ಕರಿಮೆಣಸು |
| ಖಾಳಿಯಾ | ಹಳ್ಳ |
| ತಳ್ವಾ | ಪಾದ |
| ತಳಾವ್ | ಕೆರೆ |
| ಮಳಾವ್ | ಸಭೆ |
| ಸಳೋಯಿ | ಮಾಂಸದ ಗಟ್ಟಿಸಾರು |
| ಸಾಳಿಯಾ | ನರಿ |
| ಹಳದ್ | ಅರಿಶಿಣ |
| ಹಳಿಯಾ | ಮೆಲ್ಲನೆ |

**ಪದಾಂತ್ಯ 'ಳ' ವ್ಯಂಜನ ಧ್ವನಿಮಾ:**

| | |
|---|---|
| ಅಂಗೋಳೋ | ಸುಂಟರಗಾಳಿ |
| ಅಂಗೋಳಿ | ಸ್ನಾನ |
| ಅಳಾ | ಅರಿ, ಮಸಿ |
| ಅಂಗ್ಳಿ | ಬೆರಳು |
| ಆಂಚಳ್ | ಮೊಲೆ |
| ಆಳಿ | ಓಣಿ |
| ಉಂದಾಳೊ | ಬೇಸಿಗೆ ಕಾಲ |
| ಉಳಿ | ಉಳಿ |
| ಕಟಾಳೊ | ಬೇಜಾರು |
| ಕಮಳ | ಕಮಲ |
| ಕಡಪಾತಳಿ | ನಡುಸಣ್ಣ |
| ಕಪಾಳೋ | ಹಣೆ |
| ಕಳ್ತಾ | ಜ್ಞಾನಿ |
| ಕಾಳೋ | ಕಪ್ಪು |

| | |
|---|---|
| ಕಾಂಚಳಿ | ಕುಪ್ಪಸ |
| ಕಾನ್ಸಾಮಳಿ | ಕಿವಿಮಾತು |
| ಕಾಚ್ಳಿ | ಕುಪ್ಪಸ |
| ಖಳೋ | ಕಣ |
| ಖೋಳೋ | ಕಚ್ಚೆ |
| ಗಳೋ | ಕೊರಳು |
| ಗಾಳಾ | ಹಗ್ಗ |
| ಗಾಳಿ | ಬೈಗುಳು |
| ಗಾಳ್ | ಕೆಸರು |
| ಗೋಳ್ | ಬೆಲ್ಲ |
| ಚಾಳಾ | ಆಟ |
| ಚಾವಳ್ | ಅಕ್ಕಿ |
| ಛೇಳಿ | ಆಡು |
| ಜಾಪಳ್ | ಪೇರಲೆ ಹಣ್ಣು |
| ಜಾಳಾ | ಬಲೆ |
| ಟೋಳಿ | ಗುಂಪು |
| ತರ್ಸಳ್ | ತ್ರಿಶೂಲ |
| ಢಾಳ್ | ಧ್ವನಿ |
| ತಾಳ್ | ತಾಳ |
| ದಾಳ್ | ಬೇಳೆ |
| ಥಾಳಿ | ತಟ್ಟೆ |
| ದುಬಳೋ | ದುರ್ಬಲ |
| ಧೋಳೋ | ಬಿಳುಪು |
| ನವಕಳಿ | ಏಳುಹೆಡೆ |
| ನೀಳೋ | ನೀಲಿಬಣ್ಣ |
| ನೊಣೆವಾಳೋ | ಉಪ್ಪಿನ ವ್ಯಾಪಾರಿ |
| ಪರಾಳೋ | ಭತ್ತದ ಒಣಹುಲ್ಲು |
| ಬಳ್ | ಸುಡು |
| ಭೇಳ್ | ಬೆರಸು |
| ಮಾಳ್ಳಿ | ಮೀನು |
| ಮಳ್ | ಸಿಗು |

**‘ರ’ ಇಂದು ದಂತ್ಯ ತಾಡಿತ**

**ಪದಾದಿ ‘ರ’ ವ್ಯಂಜನ ಧ್ವನಿಮಾ :**

| | |
|---|---|
| ರ | ಇರು |
| ರಡಿಪಡಿ | ಉರಳಿಬೀಳು |
| ರಡ್ | ಚಲ್ಲು |
| ರಂಜನ್ | ಹಂಡೆ |
| ರತೋ | ಇದ್ದರೆ |
| ರವತ್ತ್ | ಇರುವಲ್ಲಿ |
| ರಪಿಯಾ | ರೂಪಾಯಿ |
| ರಮಾ | ಆಡೋಣ |
| ರಸ್ | ರಸ |
| ರಂಗ್ | ಬಣ್ಣ |
| ರಥ್ | ರಥ |
| ರಚ್ | ಇರುವುದು |
| ರಟ್ಟಾ | ತೋಳು |
| ರಹ್‌ವಾಸಿ | ವಾಸಸ್ಥಾನ |
| ರಾತ್ | ರಾತ್ರಿ |
| ರಾಂಡ್ | ರಂಡೆ |
| ರೇನಿ | ಇರಲ್ಲ |

**ಪದಮಧ್ಯ ‘ರ’ ವ್ಯಂಜನ ಧ್ವನಿಮಾ :**

| | |
|---|---|
| ಅಪರೂಪೇರ್ | ಅಪರೂಪದ |
| ಅರ್‌ದಾಸ್ | ಪ್ರಾರ್ಥನೆ |
| ಅಂಬಾಡಿಭಾಜಿ | ಪುಂಡಿಪಲ್ಯ |
| ಅರೆಂಡರ್‌ತೇಲ್ | ಔಡಲು ಎಣ್ಣೆ |
| ಆಂಕಿರ್‌ಆಸು | ಕಣ್ಣೀರು |
| ಉಪರ್‌ಪಡ್ | ಮೇಲೆಬೀಳು |
| ಓರೇಸಾರು | ಆದರ ನಿಮಿತ್ಯ |
| ಕರಮಂದ್ | ಕವಳೆಕಾಯಿ |
| ಭುರೀಯಾ | ನತ್ತು |
| ಲಾರೇತಿ | ಹಿಂದಿನಿಂದ |
| ಬರೋಬರ್ | ಬರಾಬರಿ |

| | |
|---|---|
| ಡೋರಣ್ | ಸುರಿಗೆ |
| ಥೋರ್ಯ್ಕಾ | ದನಕಾಯುವ |

ಪದಾಂತ್ಯ 'ರ' ವ್ಯಜನ ಧ್ವನಿಮಾ :

| | |
|---|---|
| ಅಜಗರ್ | ಹೆಬ್ಬಾವು |
| ಅಚಾರ್ | ಉಪ್ಪಿನಕಾಯಿ |
| ಅರು | ಅರಿವು |
| ಅಂಗಾರ್ | ಬೆಂಕಿ |
| ಏರ್ | ಇವನ |
| ಕತರ್ | ಕತ್ತರಿಸು |
| ಇತರ್ | ಸುಗಂಧ |
| ಕಾರ್‌ಭಾರಿ | ತಾಂಡದ ಕಾರ್ಯದರ್ಶಿ |
| ಕಮ್‌ಜೋರಿ | ಕೊರತೆ |
| ಕಚ್ಚರೋ | ಕಸ |
| ಕಮ್‌ಕರ್ | ಕಡಿಮೆಮಾಡು |
| ಝೂರಿ | ಕಳಸಿ |
| ಖರಾ | ತಿನಿಸು |
| ಗಾಜರ್ | ಗಜ್ಜರಿ |
| ಗೋರಿ | ಸುಂದರಿ |
| ಗೋಬರ್ | ಸೆಗಣಿ |
| ಘರ್ | ಮನೆ |
| ಚರಾ | ಮೇಯಿಸು |
| ಚಾರ್ | ನಾಲ್ಕು |
| ಚೀರ್ | ಸೀಳು |
| ಚೋರಿ | ಕಳ್ಳತನ |
| ಛಪರ್ | ಗುಡಿಸಲು |
| ಛರಿ | ಕತ್ತಿ |

'ವ್' ಇದು ದಂತೋಷ್ಠ್ಯ ಅರೆವ್ಯಂಜನ ಉಪಧ್ವನಿಮಾ: ವ್ಯಂಜನ ಧ್ವನಿಮಾ ಪದಾದಿ, ಪದಮಧ್ಯ ಮತ್ತು ಪದಾಂತ್ಯದಲ್ಲಿ ಬರುತ್ತದೆ.

ಪದಾದಿ 'ವ' ವ್ಯಂಜನ ಧ್ವನಿಮಾ :

| | |
|---|---|
| ವಗತ್ | ಸಂದರ್ಭ |
| ವಕಡ್ | ಕೀಳು |
| ವತಾರ್ | ಇಳಿಸು |

| | |
|---|---|
| ವಚ್ | ಮಧ್ಯ |
| ವತನ್ | ವಾಸಸ್ಥಳ |
| ವಟಾ | ಎತ್ತು |
| ವಾವಡಿ | ಬಾವಿ |
| ವಲಾ | ಅಳಿಸು |
| ವಜಾ | ಬಾರಿಸು |
| ವರಸ್ | ವರ್ಷ |
| ವಡಗೋ | ಹಾರಿತು |
| ವತ್ತ | ಅಲ್ಲಿ |
| ವರ್ಸಾಳೋ | ಮಳೆಗಾಲ |
| ವಜಾ | ಬಾರಿಸು |
| ವತೇತೂಣೆ | ಅಲ್ಲಿಯ ತನಕ |
| ವಕಾರಿ | ವಾಕರಿಕೆ |
| ವಸ್ | ಇಬ್ಬನಿ |
| ವೀಟ್ | ಸುತ್ತು |
| ವಾತ್ | ಮಾತು |
| ವೋ | ಅವು |
| ವಾಸಿ | ಅಳಸು |

**ಪದಮಧ್ಯ 'ವ' ವ್ಯಂಜನ ಧ್ವನಿಮಾ :**

| | |
|---|---|
| ಆವಚ್ | ಬರುತ್ತಾರೆ |
| ಅವಾಜ್ | ಶಬ್ದ |
| ಕತ್ರವತ್ತ್ | ಚಲ್ಲಾಪಿಲ್ಲಿ |
| ದೇವಳೇಮ್ | ದೇವಸ್ಥಾನದಲ್ಲಿ |
| ನವಣ್ | ನಮಸ್ಕಾರ |
| ಕೋವಲ್ | ಕೋಗಿಲೆ |
| ಗಲ್ವಾಣಿ | ಬೆಲ್ಲದ ಪಾನಕ |
| ಗಾವಡಿ | ಆಕಳು |
| ಗಾವಚ್ | ಹೊಗಳು |
| ಗದಿಯಾವಾಗ್ | ಚಿರತೆ |
| ಚಡಾವಚ್ | ಹತ್ತಿಸುತ್ತಾನೆ |
| ಥೇವಟಿಯಾ | ಮದುಮಗಳ ಮೇಲ್ಮುಸುಕಿನ ತುದಿಗೆ ಕಟ್ಟಿರುವ ಒಂದು ಬಗೆಯ ಅಲಂಕಾರ |

| | |
|---|---|
| ಜವಾಂಡಾ | ನೊಗ |
| ಜೀವತೋ | ಬದುಕಿರು |
| ಡಾವ್‌ಟಾಂಗ್ | ಎಡಗಾಲು |
| ಡಾವ್ಲೋ | ಅಳುವ ಹಾಡು |
| ದವಾಳಿ | ದೀಪಾವಳಿ |
| ನವಕಳಿ | ಏಳು ಹೆಡೆ |

ಪದಾಂತ್ಯ 'ವ' ವ್ಯಂಜನ ಧ್ವನಿಮಾ:

| | |
|---|---|
| ಡಾವ್ | ಹಿರಿಯರು |
| ತೌವಾ | ಹಂಚು |
| ಕಡವಾ | ಕಹಿ |
| ಕಾವ್ | ಅದಲ್ಲ |
| ಮಳಾವ್ | ಜನರ ಗುಂಪು |
| ಕಾಲ್ವಾ | ಕಾಲುವೆ |
| ಘಾವ್ | ಗಾಯ |
| ತಳಾವ್ | ಕೆರೆ |
| ತಳ್‌ವಾ | ಪಾದ |
| ತಾವ್ | ಜ್ವರ |
| ತೌವಾ | ಹಂಚು |
| ದೇವ್ | ದೇವರು |
| ನವೋ | ಹೊಸದು |
| ನಾವಿ | ಹಜಾಮು |
| ಮಳಾವ್ | ಸಭೆ |
| ರವಾ | ರವೆ |
| ಸುವಾ | ಗಿಳಿ |
| ಸುವೋ | ಡಬ್ಬಣ |
| ಹಾವ್ | ಹೌದು |
| ಪಾವ್ | ಕಾಲು. ಕಿ, ಗ್ರಾಂ |
| ಘಾವ್ಡಾ | ಸಲಕಿ |
| ಮುವೋ | ಕೊಳಕು |

* 'ಯ' ಇದು ತಾಲವ್ಯ ಅರೆ ವ್ಯಂಜನ :

ಪದಾದಿ 'ಯ್' ವ್ಯಜನ ಧ್ವನಿಮಾ :

| | |
|---|---|
| ಯಾಡಿ | ತಾಯಿ |
| ಯೇವಡಿ | ಇಕಡೆ |

ಪದಮಧ್ಯ 'ಯ್' ವ್ಯಂಜನ್ ಧ್ವನಿಮಾ :

| | |
|---|---|
| ಆಯಿತೋ | ಬಂದರೆ |
| ಕೋಯಿಕೋ | ಯಾರೋ |
| ಕಾಂಯಿಕೋ | ಏನೋ |
| ಖಾಯೇರ್ | ತಿನ್ನುವ |

ಪದಾಂತ್ಯ 'ಯ್' ವ್ಯಂಜನ ಧ್ವನಿಮಾ :

| | |
|---|---|
| ಕಾಂಯಿ | ಏನು |
| ಕಮಾಯಿ | ಆದಾಯ |
| ಲಡಾಯಿ | ಜಗಳ, ಯುದ್ಧ |
| ಸಳೋಯಿ | ಮಾಂಸದ ಒಂದು ರೀತಿಯ ಸಾರು |
| ಚತುರಾಯಿ | ಜಾಣತನ |
| ವಿಯಾ | ವಿವಾಹ |
| ಸೂಯಿ | ಸೂಜಿ |
| ಸೇರಾಯಿ | ಮುದ್ದಿಸು |
| ಲೊಯಿ | ರಕ್ತ |

ವ್ಯಂಜನ ಗುಚ್ಛಗಳು:

ದ್ವಿವ್ಯಂಜನ ಗುಚ್ಛಗಳು:

೧. ಪದಾದಿಯಲ್ಲಿ ದ್ವಿವ್ಯಂಜನ ಗುಚ್ಛಗಳು :

೧.೧ ಸ್ಪರ್ಶ ಮತ್ತು ಸ್ಪರ್ಶೇತರ ವ್ಯಂಜನಗಳು :

| | | |
|---|---|---|
| ಪ್ರ | ಪ್ರಮೇದಾಡ್ | ನಾಡದ |
| ಬ್ರ | ಕಾಬ್ರೋ | ಕೇಸರಿ, ಕಂದು |
| ತ್ರ | ಅತ್ರಾ | ಅಷ್ಟು |
| ತ್ಯ | ತ್ಯಾರಿ | ಸಿದ್ಧತೆ |
| ಳ್ಯಾ | ಸಪೊಳ್ಯಾ | ಎರೆಹುಳು |
| ಣ್ಯ | ಸರಾಣ್ಯ | ತಲೆದಿಂಬು |
| ಗ್ಯಾ | ಆಗ್ಯಾ | ಆದೇಶ |
| ದ್ರ | ಪಂದ್ರ | ಹದಿನೈದು |
| ಕ್ರ್ | ಕಾಕ್ರ್ | ಕಲ್ಲಿನ ಚೂರು |
| ಕ್ಲ | ಲಕ್ಲ್ | ಬರೆದುಕೊಳ್ಳು |
| ಗ್ರ್ | ಸಿಲಾಗ್ರೋ | ಚಳಿ |
| ಗ್ಲ್ | ಬಂಗ್ಲಾ | ಕೊಕ್ಕರೆ |

### ೧.೨. ಸ್ಪರ್ಶೇತರ ಮತ್ತು ಸ್ಪರ್ಶ ವ್ಯಂಜನಗಳು:

| | | |
|---|---|---|
| ಸ್ಕೂ | ಸ್ಕೂಟರ್ | ಸ್ಕೂಟರು |
| ಸ್ಕೂ | ಸ್ಕೂಲ್ | ಸ್ಕೂಲು |
| ರ್ಚಾ | ಖರ್ಚಾ | ಖರ್ಚಾಗು |
| ಚ್ಕೋ | ಕಾಚ್ಕೋ | ಆಮೆ |
| ಡ್ಕಿ | ಹಿಡ್ಕಿ | ಆಕ್ಕಳಿಕೆ |

### ೨. ಪದಮಧ್ಯ ದ್ವಿವ್ಯಂಜನ ಗುಚ್ಛಗಳು:

### ೨.೧ ಸ್ಪರ್ಶ ಮತ್ತು ಸ್ಪರ್ಶ ವ್ಯಂಜನಗಳು

| | | |
|---|---|---|
| ರ್ರ | ಭೂರ್ರ | ಗೂಂಗಾಡಿ |
| ರ್ರಿ | ಭೂರ್ರಿ | ಕಡತ್ತುಳ |
| ರ್ರಾ | ಗರ್ರಾ | ಮಾಂಸ |
| ಪ್ಪ | ಹಿಪ್ಪಿ | ಕಬ್ಬಿನ ರಸತಗೆದಸಿಪ್ಪೆ |
| ಬ್ಬ | ಅಬ್ಬ್ | ಈಗ |
| ತ್ | ಅತ್ತ್ | ಇಲ್ಲಿ |
| ದ್ದ್ | ಸುದ್ದೊ | ನೆಟ್ಟನೆ |
| ಟ್ಟ್ | ರಟ್ಟಾ | ತೋಳು |
| ಡ್ಡ್ | ಗಡ್ಡಾ | ಗಡ್ಡೆ |
| ಚ್ಚ್ | ಬಿಚ್ಚಿ | ಮೊಲೆ |
| ಜ್ಜ್ | ಗೊಜ್ಜ್ | ರಾಡಿ, ಹೊಲಸು, ಕೆಸರು |
| ಕ್ಕ್ | ಬಕ್ಕ | ತಿನ್ನು, ಬೊಗಳು |
| ಗ್ಗ್ | ಅಗ್ಗನಗಾಡಿ | ರೈಲು |

### ೨.೨. ಸ್ಪರ್ಶ ಮತ್ತು ನಾಸಿಕ ವ್ಯಂಜನಗಳು

| | | |
|---|---|---|
| ತ್ಮ | ಆತ್ಮ | ಆತ್ಮ |
| ತ್ನ | ರತ್ನ | ರತ್ನಗಳು |
| ದ್ಮ | ಆದ್ಮಿ | ಮನುಷ್ಯ |
| ದ್ನ | ಬದ್ನಾ | ಹಗ್ಗ |
| ಡ್ಮ | ಅಡ್ಮಾಳ್ | ದಟ್ಟವಾದ ಕಾಡು |
| ಕ್ಮ | ಹಕ್ಮತಿ | ಬುದ್ಧಿವಂತ |

### ೨.೩ ನಾಸಿಕ ಮತ್ತು ನಾಸಿಕ ವ್ಯಂಜನಗಳು

| | | |
|---|---|---|
| ಕ್ಕ | ಬೊಕ್ಕ | ಅಡವಿ ಬೆಕ್ಕು |
| ಮ್ಮ | ಕಿಮ್ಮತ್ | ಬೆಲೆ |

| | | |
|---|---|---|
| ನ್್ | ಕನ್ನಾ | ಯಾವಾಗ |
| ಣ್್ | ಗೊಣ್ಣಿ | ಹೆಂಡತಿ |

೨.೪. ಸ್ಪರ್ಶ + ಸ್ಪರ್ಶೇತರ ವ್ಯಂಜನಗಳು

| | | |
|---|---|---|
| ತ್ರ್ | ಅತ್ರಿ | ಇಷ್ಟು |
| ತ್ವ್ | ಸತ್ವಾ | ಪರಿಕ್ಷಿಸು, ಪೀಡಿಸು |
| ತ್ಯ್ | ಸತ್ಯಾನಾಸ್ | ಹಾಳಾಗು |
| ದ್ಯ್ | ದ್ಯಾನ್ | ಗಮನ |
| ದ್ರ್ | ಅದ್ರಕ್ | ಶುಂಠಿ |
| ದ್ರ್ | ಸಾದ್ರಿ | ಚಾಪೆ |
| ಟ್ಯ್ | ತಮಾಟ್ಯ | ಟೊಮಾಟೊ |
| ಕ್ರ್ | ಕಾಕ್ರ್ | ಕಲ್ಲಿನ ಚೂರು |
| ಟ್ಲ್ | ಚೊಟ್ಲಾ | ಲಂಬಾಣಿ ಮಹಿಳೆಯರು ಹಾಕಿಕೊಳ್ಳುವ ಒಂದು ಬಗೆಯ ಆಭರಣ |
| ಡ್ಯ್ | ಪಚ್ಯಾಡ್ಯಾರ್ | ಆಮೇಲಿಂದ |
| ಡ್ರ್ | ಬಂಡ್ರೋ | ಸಿದ್ಧತೆಯಲ್ಲಿದೆ |
| ದ್ರಿ | ಸಾದ್ರಿ | ಚಾಪೆ |
| ಲ್ಡ | ಖಾಲ್ಡೋ | ಚರ್ಮ |
| ಕ್ಯ | ಕ್ಯೂ | ಹೇಗೆ |
| ಕ್ರ | ಪರಾಕ್ರಮಿ | ಚಾಣಾಕ್ಷ |
| ಕ್ಷ | ಭೀಕ್ಷಾ | ಭಿಕ್ಷೆ |
| ಗ್ಯ್ | ರಾಳಗ್ಯಾ | ನವಣೆ |
| ಗ್ರ್ | ಸಿಲಾಗ್ರೋ | ಛಳಿ, ಶೀತ |

೨.೫. ಸ್ಪರ್ಶೇತರ + ಸ್ಪರ್ಶ ವ್ಯಂಜನಗಳು

| | | |
|---|---|---|
| ಸ್ಪ್ | ಆಸ್ಪತ್ರಿ | ಆಸ್ಪತ್ರೆ |
| ರ್ದ | ಮರ್ದ್ | ಗಂಡಸ್ರು |
| ರ್ಟ್ | ಶರ್ಟ್ | ಎಸೆ |
| ಯ್ಕ್ | ನಾಯ್ಕ್ | ನಾಯಕ |

೨.೬ ನಾಸಿಕ + ಸ್ಪರ್ಶೇತರ ವ್ಯಂಜನಗಳು

| | | |
|---|---|---|
| ಮ್ | ಆಮ್ಲಿ | ಹುಣಸೆ ಹಣ್ಣು |
| ಣ್ಯ್ | ಭಾಣ್ಯಾ | ಮಳೆಹುಳ |

೨.೭ ನಾಸಿಕ ಮತ್ತು ಸ್ಪರ್ಶ ವ್ಯಂಜನಗಳು

| | | |
|---|---|---|
| ಮ್ಸ್ | ಘುಂಸಾ | ದೇಹದ ಮೇಲಿನ ಕೂದಲು |
| ನ್ಚ್ | ಉಂಚ್ | ಎತ್ತರ |
| ನ್ಟ್ | ಸೊಂಟಿ | ಹೊಕ್ಕಳು |
| ನ್ಸ | ಹೂಂಸ್ | ಹವ್ಯಾಸ |
| ನ್ದ | ರಾಂದ್ | ಕುದಿಸು |
| ನ್ಗ್ | ಹಾಂಗ್ | ಹೇಲು |
| ನ್ಕ | ಥೂಂಕ್ | ಉಗುಳು |
| ಪ್ನಿ | ಸೀಪ್ನಿ | ಕಪ್ಪೆಚಿಪ್ಪು |

೨.೮ ಸ್ಪರ್ಶೇತರ+ ಸ್ಪರ್ಶೇತರ ವ್ಯಂಜನಗಳು

| | | |
|---|---|---|
| ಸ್ಪ | ಉಸ್ಪಾಸ್ | ವಿಶ್ವಾಸ |
| ಸ್ಸ | ಬಸ್ಸ್ | ಬಸ್ಸು |
| ಲ್ವ್ | ಕಾಲ್ವ್ | ಕಾಲುವೆ |
| ರ್ಲ್ | ಕರ್ಲೇನ್ | ಮಾಡಿಕೊಂಡು |
| ರ್ರ | ಬಕ್ರಾ | ಹೋತ |
| ವ್ಯ್ | ಕಾವ್ಯಾ | ಕಾವ್ಯ |
| ರ್ಸ್ | ಖುರ್ಸಿ | ಖುರ್ಚಿ |



## ಅಧ್ಯಾಯ - ೬

# ಲಂಬಾಣಿಭಾಷೆ: ವಚನ ವಿಭಕ್ತಿ ವ್ಯವಸ್ಥೆ

ಲಂಬಾಣಿ ಭಾಷೆಯಲ್ಲಿ ಆರು ವಿಭಕ್ತಿ ಪ್ರತ್ಯಯಗಳಿವೆ. ನಾಮಪದ ಮತ್ತು ಕ್ರಿಯಾಪದಗಳೊಂದಿಗೆ ಸಂಬಂಧವನ್ನು ಹೊಂದಿರುತ್ತದೆ. ಏಕವಚನ ಮತ್ತು ಬಹುವಚನಗಳು ಕೂಡ ಪ್ರತ್ಯಯಗಳಲ್ಲಿ ಬರುತ್ತವೆ. ಲಂಬಾಣಿ ಭಾಷೆಯ ವಿಭಕ್ತಿ ಪ್ರತ್ಯಯಗಳಲ್ಲಿ ಪ್ರಥಮ ವಿಭಕ್ತಿ ಪ್ರತ್ಯಯ ರೂಪ ಇಲ್ಲ. ಕನ್ನಡದಲ್ಲಿರುವಂತೆ ಲಂಬಾಣಿ ಭಾಷೆಯಲ್ಲಿಯೂ ಹಾಗೆ ಬಳಸುತ್ತಾರೆ. ಅವುಗಳನ್ನು ಉದಾಹರಣೆಗಳೊಂದಿಗೆ ನೋಡಬಹುದು.

| | |
|---|---|
| ೧. ಪ್ರಥಮ ವಿಭಕ್ತಿ ಪ್ರತ್ಯಯ | ಇಲ್ಲ |
| ೨. ದ್ವಿತೀಯ ವಿಭಕ್ತಿ ಪ್ರತ್ಯಯ | ಆನ್,ಎನ್, |
| ೩. ತೃತೀಯ ವಿಭಕ್ತಿ ಪ್ರತ್ಯಯ | ಊತಿ, ಏತಿ, ಕಂತಿ, ಊಂತಿ, ಗಂತಿ |
| ೪. ಚತುರ್ಥಿ ವಿಭಕ್ತಿ ಪ್ರತ್ಯಯ | ಈನ್, ಆನ್, ಎನ್, |
| ೫. ಪಂಚಮಿ ವಿಭಕ್ತಿ ಪ್ರತ್ಯಯ | ಆತಿ,ಊತಿ,ಏತಿ, |
| ೬. ಷಷ್ಠಿ ವಿಭಕ್ತಿ ಪ್ರತ್ಯಯ | ಏರ್,ಓರ್,ಇರ್,ಆರ್,ಉರ್, |
| ೭. ಸಂಬೋಧನಾ ವಿಭಕ್ತಿ ಪ್ರತ್ಯಯ | ಏ,ಆ |

ಹೀಗೆ ಲಂಬಾಣಿ ಭಾಷೆಯಲ್ಲಿ ಏಳು ವಿಭಕ್ತಿ ಪ್ರತ್ಯಯಗಳ ರೂಪಗಳು ಕಂಡುಬರುತ್ತವೆ. ಅವು ಈ ಕೆಳಗಿನಂತೆ ಉದಾಹರಣೆಯೊಂದಿಗೆ ನೋಡಬಹುದು.

| | | | | |
|---|---|---|---|---|
| ೧. ಪ್ರಥಮ ವಿಭಕ್ತಿ ಪ್ರತ್ಯಯ | - | ವಾಳ್ | - | ಇಲ್ಲ |
| ೨. ದ್ವಿತೀಯ ವಿಭಕ್ತಿ ಪ್ರತ್ಯಯ | - | ವಾಳೇನ್ | - | ಆನ್,ಎನ್, |
| ೩. ತೃತೀಯ ವಿಭಕ್ತಿ ಪ್ರತ್ಯಯ | - | ವಾಳೇತಿ | - | ಊತಿ,ಎತಿ |
| ೪. ಚತುರ್ಥಿ ವಿಭಕ್ತಿ ಪ್ರತ್ಯಯ | - | ವಾಳೇನ್ | - | ಈನ್,ಆನ್,ಏನ್, |
| ೫. ಪಂಚಮಿವಿಭಕ್ತಿ ಪ್ರತ್ಯಯ | - | ವಾಳೇತಿ | - | ಆತಿ,ಊತಿ,ಏತಿ, |
| ೬. ಷಷ್ಠಿ ವಿಭಕ್ತಿ ಪ್ರತ್ಯಯ | - | ವಾಳೇರ್ | - | ರ್,ಓರ್,ಇರ್,ಆರ್,ಉರ್ |
| ೭. ಸಪ್ತಮಿ ವಿಭಕ್ತಿ ಪ್ರತ್ಯಯ | - | ವಾಳೇಮ | - | ಏ,ಆ, |

೧. ಪ್ರಥಮ ವಿಭಕ್ತಿ

ಲಂಬಾಣಿ ಭಾಷೆಯಲ್ಲಿ ಕಂಡು ಬರುವುದಿಲ್ಲ. ಘುರ್, ಝಾಡ್, ಪಾನ್, ಮುಂತಾದವುಗಳನ್ನು ನೋಡಬಹುದು.

೨. ದ್ವಿತೀಯ ವಿಭಕ್ತಿ ಪ್ರತ್ಯಯ: (ಆನ್,ಎನ್,ಉನ್)

ಅ,ಆ,ಓ ಸ್ವರಾಂತ್ಯದ ನಾಮಪದಗಳಲ್ಲಿ ಅ, ಆ, ಸ್ವರಾಂತ್ಯದ ನಾಮಪದಗಳು ಮಾತ್ರ 'ಆನ್' ಪ್ರತ್ಯಯವನ್ನು, ಉಳಿದ ಸ್ವರಾಂತ್ಯದ ನಾಮಪದಗಳು 'ಅ, ಓ' ಪ್ರತ್ಯಯವನ್ನು ಏಕವಚನ ಅಲ್ಲದೆ ಬಹುವಚನ ನಾಮಪದಗಳು ಹೊಂದುತ್ತದೆ.

ಉದಾಹರಣೆಗೆ:

| | | | |
|---|---|---|---|
| ಭೀಯಾ | ಅಣ್ಣ | ಭೀಯಾನ್ | ಅಣ್ಣನನ್ನು |
| ಬಾಳಾ | ಮಗು | ಬಾಳಾನ್ | ಮಗುವನ್ನು |
| ಬಳದ್ | ಎತ್ತು | ಬಳದೇನ್ | ಎತ್ತವನ್ನು |
| ಕಾಂದೊ | ಭುಜ | ಕಾಂದೇನ್ | ಭುಜವನ್ನು |
| ಫೂಲ್ | ಹೂವು | ಫೂಲೇನ್ | ಹೂವನ್ನು |
| ಢೋರ್ | ದನ | ಢೋರುನ್ | ದನವನ್ನು |

೩. ತೃತೀಯ ವಿಭಕ್ತಿ: (ಓತಿ, ಊತಿ, ಏತಿ, ಆತಿ)

ವ್ಯಂಜನ ಸ್ವರ (ಊ) ರೂಪದ ಮಾನವೇತರ ನಾಮಪದಗಳು 'ಓತಿ' (ವ್ಯಂಜನ) ಹೃಸ್ವಸ್ವರ, ವ್ಯಂಜನ ಹೃಸ್ವಸ್ವರ (ಅ) ರೂಪದ ಮಾನವೇತರ ನಾಮಪದ ಮಾತ್ರ (ಏತಿ) ಅಥವಾ (ಓತಿ) ಪ್ರಯತ್ನ, ವ್ಯಂಜನ ದ್ವಿತೀಯ ಸ್ವರ (ಏ), ವ್ಯಂಜನ ಹೃಸ್ವಸ್ವರ, ವ್ಯಂಜನ ರೂಪಗಳ ಮಾನವೇತರ ನಾಮಪದಗಳು ಅಲ್ಲದೆ ಪ್ರಥಮ ಪುರುಷ ನಿರ್ಜೀವ ನಪುಂಸಕ ಏಕವಚನ ಸರ್ವನಾಮಗಳಾದ ವೂ, ಈ, ಏತಿ, ಪ್ರತ್ಯಯಗಳನ್ನು ಹೊಂದುತ್ತದೆ.

ಉದಾಹರಣೆಗೆ:

| | | | |
|---|---|---|---|
| ಹಾತ್ | ಕೈ | ಹಾತೇತಿ | ಕೈಯಿಂದ |
| ಪಾನ್ | ಎಲೆ | ಪಾನೇತಿ | ಎಲೆಯಿಂದ |
| ಅಂಗಾರ್ | ಬೆಂಕಿ | ಅಂಗಾರೇತಿ | ಬೆಂಕಿಯಿಂದ |
| ಝಾಡ್ | ಮರ | ಝಾಡೇತಿ | ಮರದಿಂದ |
| ವೂ | ಅದು | ವೋತಿ | ಅದರಿಂದ |
| ಟಾಂಗ್ | ಕಾಲು | ಟಾಂಗೇತಿ | ಕಾಲಿನಿಂದ |
| ಹಾಟ್ | ಸಂತೆ | ಹಾಟೇತಿ | ಸಂತೆಯಿಂದ |

ಬಹುವಚನ ನಾಮಪದಗಳು ಹಾಗೂ ಸರ್ವನಾಮಗಳು 'ಏತಿ' ಪ್ರತ್ಯಯವನ್ನು ಹೊಂದುತ್ತವೆ. ಅಲ್ಲದೆ 'ಊತಿ' ಪ್ರತ್ಯಯವನ್ನು ಸೂಚಿಸುತ್ತದೆ.

| | | | |
|---|---|---|---|
| ಫೂಲ್ | ಹೂವುಗಳು | ಫುಲೇತಿ | ಹೂವುಗಳಿಂದ |
| ಜಾಳ್ | ಬಲೆಗಳು | ಜಾಳೇತಿ | ಬಲೆಯಿಂದ |
| ವೋ | ಅವರು | ವೊಂದೂತಿ | ಅವರಿಂದ |
| ಆಪಣ್ | ನಾವು | ಆಪಣೂತಿ | ನಮ್ಮಿಂದ |

**ಕಂತಿ, ಊಂತಿ, ಓಂತಿ**

ಉಳಿದ ರೂಪಗಳು ಪುಲ್ಲಿಂಗ, ಸ್ತ್ರೀಲಿಂಗ ಹಾಗೂ ನಪುಂಸಕ ಏಕವಚನ ನಾಮಪದಗಳು ಹಾಗೂ ಉತ್ತಮ ಮಧ್ಯಮ ಮತ್ತು ಪ್ರಥಮ ಪುರುಷ ಪುಲ್ಲಿಂಗ, ಸ್ತ್ರೀಲಿಂಗ ಹಾಗೂ ಆತ್ಮಾರ್ಥಕ ಏಕವಚನ ಸರ್ವನಾಮಗಳು ಈ ಪ್ರತ್ಯಯನ್ನು ಹೊಂದುತ್ತವೆ.

ಉದಾಹರಣೆ:

| | | | |
|---|---|---|---|
| ರಾಮ್ | ರಾಮ | ರಾಮ್ಯಾಕಂತಿ | ರಾಮನಿಂದ |
| ಭೀಯಾ | ಅಣ್ಣ | ಭೀಯಾಕಂತಿ | ಅಣ್ಣನಿಂದ |
| ದಾದಾ | ಅಜ್ಜ | ದಾದಾಕಂತಿ | ಅಜ್ಜನಿಂದ |
| ಡೊಕ್ರ | ಮುದಕ | ಡೋಕ್ರಕಂತಿ | ಮುದಕನಿಂದ |
| ಸಿಬ್ಬಿ | ಬೆಕ್ಕು | ಸಿಬ್ಬಕ್ಕಂತಿ | ಬೆಕ್ಕಿನಿಂದ |

ಅಲ್ಲದೆ ಪುಲಿಂಗ, ಸ್ತ್ರೀಲಿಂಗ ಜೀವನಪುಂಷಕ ಬಹುವಚನ ನಾಮಪದಗಳು ಹಾಗೂ ಬಹವಚನ ಸರ್ವನಾಮಗಳು 'ಉತಿ' ಪ್ರತ್ಯಯವನ್ನು ಹೊಂದುತ್ತವೆ.

| | | | |
|---|---|---|---|
| ಭಾಯಿವೋ | ತಮ್ಮಂದಿರು | ಭಾಯೂಂತಿ | ತಮ್ಮಂದಿರಿಂದ |
| ಬಾಯಿವೋ | ಅಕ್ಕಂದಿರು | ಬಾಯೋಂತಿ | ಅಕ್ಕಂದಿರಿಂದ |
| ವೋ | ಅವರು | ವೋಂದೂತಿ | ಅವರಿಂದ |
| ಸಿಬ್ಬಿವೋ | ಬೆಕ್ಕುಗಳು | ಸಿಬ್ಬಿವೂಂತಿ | ಬೆಕ್ಕುಗಳಿಂದ |

**೪. ಚತುರ್ಥಿ ವಿಭಕ್ತಿಪ್ರತ್ಯಯಗಳು (ಈನ್, ಏನ್, ಆನ್)**

ವ್ಯಂಜನ ದ್ವಿತೀಯ ಸ್ವರ (ಊ) ರೂಪದ ಹಾಗೂ ಹೃಸ್ವ ವ್ಯಂಜನ ಸ್ವರ (ಉ) ರೂಪದನಾಮಪದಗಳು 'ಏನ್' ಪ್ರತ್ಯಯವನ್ನು ವ್ಯಂಜನ ಹೃಸ್ವ ಸ್ವರ (ಅ) ರೂಪದ ನಾಮಪದಗಳು ಮಾತ್ರ 'ಏನ್' ಪ್ರತ್ಯಯವನ್ನು ವ್ಯಂಜನ ದ್ವಿತೀಯ ಸ್ವರ (ಅ,ಏ) ವ್ಯಂಜನ ಹೃಸ್ವ ಸ್ವರ-ವ್ಯಂಜನ ರೂಪಗಳು ನಾಮಪದಗಳು ಅಲ್ಲದೆ ಉತ್ತಮ ಪುರುಷ ಏಕವಚನ ಮಧ್ಯಮ ಪುರುಷ, ಪ್ರಥಮ ಪುರುಷ ಏಕವಚನ (ಸಮೀಪಾಂತರ ಮತ್ತು ದೂರಾಂತರ) ಹಾಗೂ ಆತ್ಮಾರ್ಥಕ ಏಕವಚನ ಸರ್ವನಾಮ 'ನ್' ಪ್ರತ್ಯವನ್ನು ಹೊಂದುತ್ತದೆ.

ಉದಾ:

| | | | |
|---|---|---|---|
| ಬಿಚ್ಚಿ | ಮೊಲೆ | ಬಿಚ್ಚೀನ್ | ಮೊಲೆಗೆ |
| ಫೂಲ್ | ಹೂವು | ಫೂಲೇನ್ | ಹೂವಿಗೆ |
| ಕಾಂದೊ | ಭುಜ | ಕಾಂದೇನ್ | ಭೂಜಕ್ಕೆ |
| ಬಾ | ತಂದೆ | ಬಾಪೇನ್ | ತಂದೆಗೆ |
| ಮಾಮಾ | ಮಾಮಾ | ಮಾಮಾನ್ | ಮಾಮಾಗೆ |

ಬಹುವಚನ ನಾಮಪದಗಳು ಹಾಗೂ ಸರ್ವನಾಮಗಳು (ಏನ್, ಇನ್, ಓನ್) ಪ್ರತ್ಯಗಳು ಹೊಂದುತ್ತದೆ.

| | | | |
|---|---|---|---|
| ಬಂಗಡಿ | ಬಳೆಗಳು | ಬಂಗಡಿನ್ | ಬಳೆಗಳಿಗೆ |
| ಗೊಣ್ಣಿ | ಹೆಂಡತಿಯರು | ಗೊಣ್ಣಿವೋನ್ | ಹೆಂಡತಿಯರಿಗೆ |
| ಝಾಡ್ | ಗೀಡಗಳು | ಝಾಡೇನ್ | ಗಿಡಗಳಿಗೆ |
| ಮಾಚರ್ | ಸೊಳ್ಳೆಗಳು | ಮಾಚರೇನ್ | ಸೊಳ್ಳೆಗಳಿಗೆ |

| | | | |
|---|---|---|---|
| ಟಾಂಗ್ | ಕಾಲುಗಳು | ಟಾಂಗೇನ್ | ಕಾಲುಗಳಿಗೆ |
| ಕಾಂದೊ | ಭುಜಗಳು | ಕಾಂದೇನ್ | ಭುಜಗಳಿಗೆ |

**೫. ಪಂಚಮಿ ವಿಭಕ್ತಿ: (ಆತಿ, ಓತಿ, ಊತಿ, ಇತಿ, ಏತಿ)**

'ಉ' ಅಥವಾ 'ಊ' ಸ್ವರಾಂತ್ಯದ ಏಕವಚನ ನಾಮಪದಗಳು 'ಓತಿ' ಅಥವಾ 'ತಿ' ಪ್ರತ್ಯಯವನ್ನು 'ಆ' ಸ್ವರಾಂತ್ಯದ ನಾಮಪದಗಳು ಮಾತ್ರ 'ಏತಿ' ಅಥವಾ 'ಆತಿ' ಪ್ರತ್ಯವನ್ನು ಉಳಿದ ಸ್ವರಾಂತ್ಯದ ಏಕವಚನ ನಾಮಪದಗಳು ಅಲ್ಲದೆ ಎಲ್ಲಾ ಬಹುವಚನ ನಾಮಪದಗಳು 'ಏತಿ' ಪ್ರತ್ಯಯವನ್ನು ಹೊಂದುತ್ತದೆ.

**ಉದಾಹರಣೆ:**

| | | | |
|---|---|---|---|
| ಬೇಟಾ | ಮಗ | ಬೇಟಾತಿ | ಮಗನಿಂದ |
| ಥೋರ್ಯಾ | ಕಳ್ಳು | ಥೋರ್ಯಾತಿ | ಕಳ್ಳಿನಿಂದ |
| ಮ | ನಾನೂ | ಮೋತಿ | ನನ್ನಿಂದ |
| ವೂ | ಅದು | ವೊಂದೂತಿ | ಅವರಿಂದ |
| ಮಾಚಳಿ | ಮೀನು | ಮಾಚಳಿತಿ | ಮೀನೀಂದ |
| ಸಬ್ಬಳ್ | ಹಾರಿ\ರೆ | ಸಬ್ಬಳೇತಿ | ಹಾರೆಯಿಂದ |

**೬. ಷಷ್ಠಿ ವಿಭಕ್ತಿ ಪ್ರತ್ಯಯಗಳು: (ಏರ್, ಓರ್, ಇರ್, ಆರ್, ಉರ್)**

ವ್ಯಂಜನ ದ್ವಿತೀಯಸ್ವರ 'ವೂ' ಹ್ರಸ್ವಸ್ವರ ವ್ಯಂಜನ ಹ್ರಸ್ವಸ್ವರ ಹಾಗೂ ವ್ಯಂಜನ ರೂಪಗಳು ಮಾನವೇತರ ನಾಮಪದಗಳು ಅಲ್ಲದೆ ಪ್ರಥಮ ಪುರುಷ ನಪುಂಸಕ ಏಕವಚನ ಸರ್ವನಾಮಗಳು (ಸಮೀಪ ಮತ್ತು ದುರಾಂತರ) 'ಓರ್' 'ಏರ್' ಪ್ರತ್ಯಯ ಹೊಂದಿರುತ್ತವೆ.

**ಉದಾಹರಣೆ:**

| | | | |
|---|---|---|---|
| ಅಂಗಾರ್ | ಬೆಂಕಿ | ಅಂಗಾರೇರ್ | ಬೆಂಕಿಯ |
| ಪಾನ್ | ಎಲೆ | ಪಾನೇರ್ | ಎಲೆಯ |
| ಝಾಡ್ | ಮರ | ಝಾಡೇರ್ | ಮರದ |
| ವೂ | ಅದು | ವೋರ್ | ಅದರ |
| ಈ | ಇದು | ಏರ್ | ಇದರ |

ಉಳಿದ ಮಾನವೇತರ ನಾಮಪದಗಳು 'ಆರ್' 'ಇರ್' ಪ್ರತ್ಯಯವನ್ನು ಹೊಂದುತ್ತವೆ.

| | | | |
|---|---|---|---|
| ಬಂಗಡಿ | ಬಳೆ | ಬಂಗಡಿರ್ | ಬಳೆಯ |
| ಇಂಡಾ | ಮೊಟ್ಟೆ | ಇಂಡಾರ್ | ಮೊಟ್ಟೆಯ |
| ಕುತ್ರಾ | ನಾಯಿ | ಕುತ್ರಾರ್ | ನಾಯಿಯ |
| ಪುಚಡಿ | ಬಾಲ | ಪುಚಡಿರ್ | ಬಾಲದ |
| ಭಾಟಾ | ಕಲ್ಲು | ಭಾಟಾರ್ | ಕಲ್ಲಿನ |
| ಬಂಗ್ಲಾ | ಕೊಕ್ಕರೆ | ಬಂಗ್ಲಾರ್ | ಕೊಕ್ಕರೆಯ |
| ಪಿಸಾ | ಹಣ | ಪಿಸಾರ್ | ಹಣದ |

ಅಲ್ಲದೆ ಎಲ್ಲಾ ಬಹುವಚನ ನಾಮಪದಗಳು ಹಾಗೂ ಸರ್ವನಾಮಗಳು 'ಊರ್' 'ಓರ್' ಪ್ರತ್ಯಯವನ್ನು ಹೊಂದುತ್ತವೆ

ಉದಾಹರಣೆ:

| | | | |
|---|---|---|---|
| ಫೂಲ್ | ಹೂವುಗಳು | ಫೂಲೂರ್ | ಹೂವುಗಳ |
| ಭಾಟಾ | ಕಲ್ಲುಗಳು | ಭಾಟಾವೂರ್ | ಕಲ್ಲುಗಳ |
| ಭಾಯಿ | ಅಣ್ಣಂದಿರು | ಭಾಯಿವೂರ್ | ಅಣ್ಣಂದಿರ |
| ಕುತ್ರಾ | ನಾಯಿಗಳು | ಕುತ್ರಾವೂರ್ | ನಾಯಿಗಳು |
| ವೂ | ಅವರು | ವೋರ್ | ಅವರ |

ಸಪ್ತಮಿ ವಿಭಕ್ತಿ : ಏಮ್, ಊಮ್

ಉದಾಹರಣೆ:

| | | | |
|---|---|---|---|
| ಘರೇಮ್ | ಮನೆಯಲ್ಲಿ | ಘರೇವೂಮ್ | ಮನೆಯಲ್ಲಿ |
| ಭಾಟಾಮ್ | ಕಲ್ಲಲ್ಲಿ | ಭಾಟಾವೂಮ್ | ಕಲ್ಲುಗಳಲ್ಲಿ |
| ವಿಚುಮ್ | ಚೆಳುನಲ್ಲಿ | ವಿಚುವೂಮ್ | ಚೇಳುಗಳಲ್ಲಿ |
| ಓಲ್ಡೀಮ್ | ಬುಟ್ಟಿಯಲ್ಲಿ | ಓಲ್ಡಿಯೂಮ್ | ಬುಟ್ಟಿಗಳಲ್ಲಿ |
| ಖೇತೆಮ್ | ಹೊಲದಲ್ಲಿ | ಖೇತೆಯೂಮ್ | ಹೊಲಗಳಲ್ಲಿ |
| ಟಾಂಗೇಮ್ | ಕಾಲಲ್ಲಿ | ಟಾಂಗೂಮ್ | ಕಾಲುಗಳಲ್ಲಿ |
| ಹಾತೇಮ್ | ಕೈಯಲ್ಲಿ | ಹಾತೇಮ್ | ಕೈಗಳಲ್ಲಿ |
| ಆಂಕಿಮಾ | ಕಣ್ಣಲ್ಲಿ | ಆಂಕಿಯೂಮ್ | ಕಣ್ಣುಗಳಲ್ಲಿ |

ಸಂಬೋಧನ ವಿಭಕ್ತಿ : ಆ, ಏ;

ಸಂಬೋಧನಾ ರೂಪಗಳು:

ವ್ಯಕ್ತಿಗಳಿಗೆ, ಜಂತುಗಳಿಗೆ, ವಸ್ತುಗಳಿಗೆ, ಮರಗಳಿಗೆ, ಪರ್ವತಗಳಿಗೆ ಸಂಬಂಧಿಸಿದ ರೂಪಗಳು ಈ ಕೆಳಗಿನಂತಿವೆ.

ಉದಾಹರಣೆ :

ದಾಮಲಾ ! ಅತ್ ಆಜೋ = ದಾಮಲಾ ! ಇಲ್ಲಿ ಬಾ!

ಸಂಬಂಧ ಬೋಧಕ ವಾಚಕಗಳಲ್ಲಿ ಕಂಡುಬರುತ್ತವೆ

ಉದಾಹರಣೆ :

| | |
|---|---|
| ಭೀಯಾ | ಅಣ್ಣ |
| ಯಾಡೀ | ತಾಯಿ |
| ಬಾಪೂ | ಅಪ್ಪಾಜಿ |
| ಬೇಟಾ | ಮಗ |
| ಬಾ | ತಂದೆ |

'ಏ' ಅನ್ನುವ ಸಂಬೋಧನಾ ವಾಚಕ:

**ಉದಾಹರಣೆ :**

ಏ ಭೀಯಾ ಓ ಅಣ್ಣ

ಏ ಬಾಯೀ ಓ ಅಕ್ಕ\ತಂಗಿ

ಏ ಭಾಯೀ ಓ ತಮ್ಮ

ಏ ಬೇನ್ ಓ ತಂಗಿ

ಒಂದೊಂದು ಸಾರಿ ಸಂಬೋಧನಾ ವಾಚಕಗಳು ಪುನರಾವರ್ತನೆಗೊಳ್ಳುತ್ತವೆ.

ಉದಾಹರಣೆ :

ಯಾಡಿ ಯಾಡಿ = ಅಮ್ಮಮ್ಮ

ಅತ್ಯಂತ ಸಮಿಪಾಂತರಕ್ಕೆ 'ಅರೆ' ಎಂಬ ಸಂಬೋಧನಾ ವಾಚಕ ಬಳಸುತ್ತಾರೆ.

**ಉದಾಹರಣೆ :**

ಅರೆ ತೂ ಕೆವಡಿ ಗೋತೋ = ಲೇ ನೀನು ಎಲ್ಲಿಗೆ ಹೋಗಿದೆ.

**ಉದ್ದಿಷ್ಟ ವಿಭಕ್ತಿ (ಕಾರಕ) :**

**ಸಾರು ಗಾಗಿ**

ಮಾರ್ ಸಾರು ಊ ಹಾಟೇನ್ ಜಾನ್ ಆಯೋ

ನನಗಾಗಿ ಅವನು ಸಂತೆಗೆ ಹೋಗಿಬಂದ

**ತರ ಭಾವ ವಿಭಕ್ತಿ (ಕಾರಕ) :**

**ಮಾರ್ನಿ ನನ್ನಹಾಗೆ**

ಶಾಮ್ ಮಾರ್ನಿ ಓದೇನಿ ವಾಚೇನಿ

ಶಾಮ್ ನನ್ನಹಾಗೆ ಓದುವುದಿಲ್ಲ

**ಸಂವತ್ಸ ಕಾರಣಾರ್ಥ ವಿಭಕ್ತಿ (ಕಾರಕ) :**

**ವಡಿತಿ ಮುಖಾಂತರ**

ಓರ್ ವಡಿತಿ ಮನ್ ಕಾಮ್ ಮಳೋತೋ

ಅವನ ಮುಖಾಂತರ ನನಗೆ ಕೆಲಸ ಸಿಕ್ಕಿತ್ತು

**ಸಹತ್ವ ವಿಭಕ್ತಿ (ಕಾರಕ) :**

**ಸೋಬತ್ ಒಟ್ಟಿಗೆ**

ಓರ್ ಸೋಬತ್ ಮ ಶಾಲಿನ್ ಗೇ

ಅವಳ ಜೊತೆಯಲ್ಲಿ ನಾನು ಶಾಲೆಗೆ ಹೋದೆ

### ೩.೨. ಅನುಸರ್ಗಗಳು

ಅನುಸರ್ಗಗಳು ಕೆಲವೊಂದು ವಿಭಕ್ತಿ ರೂಪಗಳೊಟ್ಟಿಗೆ ಬಳಸಲ್ಪಡುತ್ತವೆ. ಕೆಲವೊಂದು ಅನುಸರ್ಗಗಳು ನಾಮಪದ ಹಾಗೂ ನಾಮವಿಶೇಷಣ ರೂಪಗಳೊಟ್ಟಿಗೆ ಬಳಸಲ್ಪಡುತ್ತದೆ. ಅವುಗಳನ್ನು ಕೆಳಗಡೆ ಕೊಡಲಾಗಿದೆ.

**ಹೇಟ್ ಕೆಳಗೆ**

ವೋ ಝಾಡೇರ್ ಹೇಟ್ ಊ ಬೇಟೋಚ್

ಆ ಮರದ ಕೆಳಗೆ ಅವನು ಕೂತಿದ್ದಾನೆ

**ಊಪರ್ ಮೇಲೆ**

ಈ ಟೇಬಲೇಪರ್ ಪುಸ್ತಕ್ ಮೇಲೂಚು

ಈ ಮೇಜಿನ ಮೇಲೆ ಪುಸ್ತಕ ಇಡುತ್ತೇನೆ

**ಮುಂಡಾಗ್ ಎದುರು**

ಆ ಸಾಲಿರ್ ಮುಂಡಾಗ್ ಆಚೋ ಫೂಲೇರ್ ಬಗೀಚಾ ಛ

ಆ ಶಾಲೆಯ ಎದುರು ಒಳ್ಳೆಯ ಹೂವಿನ ತೋಟವಿದೆ

**ಲಾರ್ ಹಿಂದೆ**

ಮಾರ್ ಘರೇರ್ ಲಾರ್ ಮೋಟೋ ಬೈಸಾಕ್ ಛ

ನನ್ನ ಮನೆಯ ಹಿಂದೆ ದೊಡ್ಡ ಅಂಗಳ ಇದೆ

**ಮಾಯಿ ಒಳಗೆ**

ಮಾರ್ ದೋಸ್ತ್ ಘರೇರ್ ಮಾಯಿ ಗೋ

ನನ್ನ ಗೆಳೆಯ ಮನೆ ಒಳಗೆ ಹೋದ

**ಕನ್ ಹತ್ತಿರ**

ವೋ ಸಾಲಿರ್ ಕನ್ ರಮರೇಚ್

ಅವರು ಶಾಲೆಯ ಹತ್ತಿರ ಆಡುತ್ತಿದ್ದಾರೆ

**ಲಗೂಣ ವರೆಗೆ**

ತೂ ಕಾಕಾ ಆಯೇ ಲಗೂಣ್ ಅತ್ ರ$$$

ನೀನು ಚಿಕ್ಕಪ್ಪ ಬರುವವರೆಗೆ ಇಲ್ಲಿರು

**ಸಾಂವೂ ಅತ್ತಕಡೆ**

ವಂದೂರ್ ಡೋರ್ ಖೇತೇ ಸಾಂವೂ ಡಗರ್ ಗೋ

ಅವರ ದನವು ಗದ್ದೆಯ ಕಡೆಗೆ ಹೋಯ್ತು

ಒಂದು ಕೆಲಸವು ನಡೆಯಬೇಕಾದ್ದಲ್ಲಿ ಲಂಬಾಣಿ ವಾಕ್ಯದಲ್ಲಿ ಬಳಸುವ ಅನುಸರ್ಗಗಳನ್ನು (ಮೇಲಿನಂತೆ) ಉಪಯೋಗಿಸಿ ಬಳಸಲಾಗುತ್ತದೆ.

**ಲಂಬಾಣಿ ವಾಕ್ಯ ವಿಜ್ಞಾನ :**

ಲಂಬಾಣಿ ಭಾಷೆಯಲ್ಲಿ ವಾಕ್ಯಗಳು ಭಾರತೀಯ ಭಾಷೆಗಳಲ್ಲಿರುವ ಕರ್ತೃ, ಕರ್ಮ, ಕ್ರಿಯೆ ಈ ರೀತಿಯಲ್ಲಿ ಹೊಂದಿದೆ. ವಾಕ್ಯಗಳಲ್ಲಿ ಪ್ರಧಾನ ವಾಕ್ಯಗಳು ಮತ್ತು ಅಪ್ರಧಾನ ವಾಕ್ಯಗಳು ಎಂದು ಎರಡು ರೀತಿಯಲ್ಲಿವೆ.

೧. ಪ್ರಧಾನ ವಾಕ್ಯಗಳು:

೧.೧. ಸಾಮಾನ್ಯ ವಾಕ್ಯಗಳು: ಇದರಲ್ಲಿ ಕ್ರಿಯೆ ಇರುವ ಮತ್ತು ಕ್ರಿಯ ಇಲ್ಲದಿರುವ ಎರಡು ರೂಪಗಳಿವೆ.

೧.೧. ಕ್ರಿಯ ರಹಿತ ವಾಕ್ಯ:

**ಉದಾಹರಣೆ :**

| | |
|---|---|
| ಈ ಘರ್ | ಈ ಮನೆ \ ಇದು ಮನೆ |
| ಈ ಹಮಾರ್ ಘರ್ | ಈ ನಮ್ಮ ಮನೆ \ ಇದು ನಮ್ಮ ಮನೆ |

ಈ ಮೇಲಿನ ಎರಡು ವಾಕ್ಯಗಳಲ್ಲಿ ಕ್ರಿಯ ರಹಿತ ಇದ್ದರೂ ವಾಕ್ಯ ರೂಪದಲ್ಲಿ ಬಳಕೆಯಲ್ಲಿವೆ.

| | |
|---|---|
| ಈ ಹಮಾರ್ ಘರ್ ಛ | ಇದು ನಮ್ಮ ಮನೆ ಇದೆ |
| ಈ ಹಮಾರ್ ಘರ್ ಕೋನಿ | ಇದು ನಮ್ಮ ಮನೆ ಅಲ್ಲ |
| ಬಾಮಣ ಆರೋಚ್ ? | ಬ್ರಾಹ್ಮಣ ಬರುತಿದ್ದಾನೆ. |
| ಮ ಬಾಟಿ ಖಾಯಿಲಿದೋ | ನಾನು ರೊಟ್ಟಿ ತಿಂದೆ |

ಈ ಮೇಲಿನ ಎರಡು ವಾಕ್ಯಗಳಲ್ಲಿ ಅಕರ್ಮಕ ಹಾಗೂ ಸಕರ್ಮಕ ಕ್ರಿಯೆಗಳಿಂದ ಕೂಡಿದೆ. ಆದರೆ ಇದು ಕೇವಲ ಆರ್ಯ ಭಾಷೆಯಲ್ಲಿ ಕರ್ಮಣಿ ವಾಕ್ಯಯಲ್ಲಿ ಮಾತ್ರ ಬಳಕೆಯಲಿಲ್ಲ\ಇದೆ

| | |
|---|---|
| ಈ ಕಾಮ್ ಮ ಕಿದೋ | ಈ ಕೆಲಸ ನಾನು ಮಾಡಿದೆ |
| ಈ ಕಾಮ್ ಮೊತಿ ವೇಗೋ | ಈ ಕೆಲಸ ನನ್ನಿಂದ ಆಯಿತು. |

**೨. ಸಂಯುಕ್ತ ವಾಕ್ಯ:**

ಎರಡು ವಾಕ್ಯಗಳು ಸೇರಿ ಸಂಯುಕ್ತ ವಾಕ್ಯ ಆಗುತ್ತದೆ. ಇಲ್ಲಿ ವಾಕ್ಯಗಳಲ್ಲಿ ಒಂದು ಪದಾಂಶ ಸಾದಾರಣವಾಗಿರುತ್ತದೆ. ಕನ್ನಡ ಭಾಷೆಯಲ್ಲಿ ಪದಾಂಶಗಳು ಸೇರಿ ಎರಡು ವಾಕ್ಯಗಳು ಪಕ್ಕಪಕ್ಕದಲ್ಲಿ ಬಂದರೆ ಅದು ಸಂಯುಕ್ತ ವಾಕ್ಯವಾಗುತ್ತದೆ.

೨.೧. ಊ ಛೋರಿ ಆಚ್ ಗೀದ್ ಬೊಲಚ್, ಆಚ್ ನಾಚಚ್

ಆ ಹುಡುಗಿ ಚನ್ನಾಗಿ ಹಾಡುತ್ತಾಳೆ, ಚನ್ನಾಗಿ ಕುಣಿಯುತ್ತಾಳೆ.

೨.೨. ಮ ಜಾರೋಚು, ಊಛಿ ಆರೋಚ್

ನಾನು ಹೋಗುತ್ತಿದ್ದೇನೆ. ಅವನು ಸಹ ಬರುತ್ತಿದ್ದಾನೆ.

ಸಂಬಂಧವನ್ನು ಹೇಳುವ ಅಥವಾ ಬೋಧಿಸುವ **'ಜೇರ್‌ಕಣ್'** (ಬಳಿಗ) ಎಂಬ ರೂಪ ಸೇರಿ ಸಂಯುಕ್ತ ವಾಕ್ಯವಾಗುತ್ತದೆ.

೨.೩. ತೂ ಆರೋಚಿ ಜೇರ್‌ಕಣ್ ಮಬೀ ಆರೋಚು

ನೀನು ಯಾರ ಬಳಿಗ ಹೋಗುವಿಯೋ ನಾನು ಅಲ್ಲಿಗೇ ಬರುತ್ತಿದ್ದೇನೆ.

ವಿಕಲ್ಪವಾಗಿ **'ಫರನ್'** (ಆದರೆ) ಎನ್ನುವ ರೂಪ ಸೇರಿ ಸಂಯುಕ್ತ ವಾಕ್ಯವಾಗುತ್ತದೆ.

೨.೪. ಬೋಡಿ ಆಯಿ; ಫರನ್, ಬೇಟಾ ಆಯೋ ಕೋನೀ

ಸೊಸೆ ಬಂದಳು ಆದರೆ ಮಗ ಬರಲಿಲ್ಲ

**೩. ಅಪ್ರಧಾನ ವಾಕ್ಯಗಳು:**

**೩.೧. ಸಂಬೋಧನಾ ವಾಕ್ಯಗಳು:**

**ಉದಾಹರಣೆ :**

ಯಾಡಿ ! ಕನ್ನಾ ಆಯೀ = ಅಮ್ಮ! ಯಾವಾಗ ಬಂದೆ

ಈ ಮೇಲಿನ ವಾಕ್ಯದಲ್ಲಿ **'ಅಮ್ಮ'** ಯಾಡಿ ಎಂಬ ಸ್ಥಾಯಿರುವ ಸಂಬೋಧನಾ ರೂಪ

**೩.೨. ಪ್ರಶ್ನಾರ್ಥಕ ವಾಕ್ಯ:**

ತೂಕತ್ ಛೀ?

ನೀನು ಎಲ್ಲಿದ್ದಿಯಾ?

ತೂ ಕತ್ ಜಾರೋ ಚಿ?

ನೀನು ಎಲ್ಲಿಗೆ ಹೋಗುತ್ತಿದ್ದಿಯಾ?

೩.೩. ಅಶ್ಚರ್ಯಾರ್ಥಕ ವಾಕ್ಯ

ಅಬ್ಬಾ! ಕಾಂಯೀ ಛರ?

ಅಬ್ಬಾ !ಏನಿದೆ?

(ಅಶ್ಚಯ್ಯಾರ್ಥಕ ಸೂಚಕ ಅಬ್ಬ ಕನ್ನಡ ಭಾಷೆಯಲ್ಲಿ ಸಂಬೋಧೆಯನ್ನು ಸೂಚಿಸುತ್ತದೆ.)

೩.೪. ವ್ಯತಿರಿಕ್ತ ವಾಕ್ಯ

'ಊ ಮಾರ್ ಕೊನಿ'

ಅದು ನನ್ನದಲ್ಲ

'ಮಾರ್‌ಡಾಯಿಂ ಪಿಸಾ ಛೇನಿ'

ನನ್ನ ಹತ್ತಿರ ಹಣ ಇಲ್ಲ

೩.೫. ಸಮಾಧಾನ ವಾಕ್ಯಗಳು

'ಛೋರಾ ಆಚೊ ಛೀ ಕಾಯೀಂ'

ಹುಡುಗ ಚನ್ನಾಗಿ ಇದಿಯಾ ಈ ಪ್ರಶ್ನೆಯು ಸಹ ಸಮಾಧಾನ

'ಆಛೋ ಛೂ ವಾರು ಛೂ'

ಚನ್ನಾಗಿದ್ದೇನೆ! ಅರಾಮಾಗಿದ್ದೇನೆ!

(ಚನ್ನಾಗಿ) ಎನ್ನುವುದು ಮಾತ್ರ ಸಮಾಧಾನವಾಗಿದೆ.

೩.೬. ಅಭಿನಂದನ ವಾಕ್ಯ

ಇಬ್ಬರು ವ್ಯಕ್ತಿಗಳು ಸೇರಿದಾಗ ಅಬಿನಂದಿಸುವ ವಾಕ್ಯ ಸುಪ್ರಸಿದ್ಧವಾಗಿದೆ.

ರಾಮ್ ರಾಮ್ ನಾಯಕ್

೩.2. ಜೋಡು ಪದಗಳು

ಲಂಬಾಣಿ ಭಾಷೆಯಲ್ಲಿ ಮೂಲಪದದ ಆದಿಸ್ವರ ಹ್ರಸ್ವವಾಗಿದ್ದರೆ 'ಹ್ರಸ್ವಸ್ವರವೂ', ದೀರ್ಘವಾಗಿದ್ದರೆ 'ದೀರ್ಘಸ್ವರವೂ' ಪ್ರತಿ ಧ್ವನಿಪದದಲ್ಲಿ ಪ್ರತಿನಿಧಾನವಾಗಿಬರುತ್ತದೆ. ಅಂದರೆ ಮೂಲಪದದ ಒಂದು ಭಾಗ ಬರುತ್ತದೆ. ಇವು ಸ್ವತಂತ್ರ ಪದಗಳಾದ ಮೂಲಪದಗಳೊಟ್ಟಿಗೆ ಬರುವುದರಿಂದ ಇವನ್ನು (ಮ, ಮಿ, ಅಥವಾ ಮೂ, ಮೋ) ಬದ್ದ ರೂಪಗಳೆಂದು ಕರೆಯಬಹುದು. ಹೀಗೆ ಮೂಲಪದದ ಒಂದು ಭಾಗ ಪುನರಾವರ್ತನೆಯಾಗಿ ಬರುವುದರಿಂದ ಇವುಗಳನ್ನು 'ಪ್ರತಿಧ್ವನಿ ಪದ' ಗಳೆಂದು ಹೆಸರಿಸಬಹುದು. ಇವು ಸಾಮಾನ್ಯವಾಗಿ 'ಅಂತಹ, ಇತರ' ಎಂಬರ್ಥವನ್ನು ಕೊಡುತ್ತದೆ.

ಉದಾಹರಣೆಗೆ;

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಬಂಗ್‌ಡಿ | ಬಳೆ | ಬಂಗ್‌ಡಿ - ಮಂಗ್‌ಡಿ | ಬಳೆಗಿಳೆ |
| ಛಪ್ಲಿ | ಹಲ್ಲಿ | ಛಪ್ಲಿ - ಮಪ್ಲಿ | ಹಲ್ಲಿಗಿಲ್ಲಿ |
| ಸಿಬ್ಬಿ | ಬೆಕ್ಕು | ಸಿಬ್ಬಿ - ಮಿಬ್ಬಿ | ಬೆಕ್ಕುಗಿಕ್ಕು |
| ಬಿಚ್ಚಿ | ಮೊಲೆ | ಬಿಚ್ಚಿ - ಗಿಚ್ಚಿ | ಮೊಲೆಗಿಲೆ |
| ದೂದ್ | ಹಾಲು | ದೂದ್ - ಮೂದ್ | ಹಾಲುಗೀಲು |

| | | | |
|---|---|---|---|
| ಮಾಚಳಿ | ಮೀನು | ಮಾಚಳಿ - ಕಾಚಳಿ | ಮೀನುಗೀನು |
| ಡೋರ್ | ದನ್ | ಡೋರ್ - ಮೋರ್ | ದನಗಿನ |

ಮೂಲಪದ ಸಂಪೂರ್ಣವಾಗಿ ಪುನರಾವರ್ತನೆಯಾದರೆ ಅವು ದ್ವಂದ್ವ ಪದಗಳಾಗುತ್ತವೆ. ಇವು ಸಾಮಾನ್ಯವಾಗಿ ವಸ್ತುಗಳ ಬಹುತ್ವವನ್ನು ಸೂಚಿಸುತ್ತದೆ.

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಘರ್ | ಮನೆ | ಘರ್ ಘರ್ | ಮನೆ ಮನೆ |
| ಗಾಮ್ | ಊರು | ಗಾಮ್‌ಮ್ | ಊರೂರು |
| ಹಾಟ್ | ಸಂತೆ | ಹಾಟಾಟ್ | ಸಂತೆಸಂತೆ |
| ಖೇತ್ | ಗದ್ದೆ | ಖೇತ್ಖೇತ್ | ಗದ್ದೆ ಗದ್ದೆ |
| ವಾಟ್ | ದಾರಿ | ವಾಟ್ವಾಟ್ | ಹಾದಿಬೀದಿ |

**ಸಂಖ್ಯಾವಾಚಕಗಳು;**

ಈ ಸಂಖ್ಯಾವಾಚಕಗಳು ಕರ್ನಾಟಕ ಮತ್ತು ಆಂಧ್ರಪ್ರದೇಶದ ಕೆಲವು ಜಿಲ್ಲೆಗಳನ್ನು ಆದರಿಸಿ ಪ್ರಚಲಿತ ಇರುವ ಲಂಬಾಣಿ ಭಾಷೆಯಲ್ಲಿನ ಸಂಖ್ಯಾವಾಚಕಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಸಂಖ್ಯೆಗಳು : ೧ ರಿಂದ ೧೦ರ ವರೆಗೆ

| ಲಂಬಾಣಿ | ಕನ್ನಡ |
|---|---|
| ಏಕ್ | ಒಂದು |
| ದೀ | ಎರಡು |
| ತೀನ್ | ಮೂರು |
| ಚಾರ್ | ನಾಲ್ಕು |
| ಪಾಂಚ್ | ಐದು |
| ಛೋ/ಚೋ | ಆರು |
| ಸಾತ್ | ಏಳು |
| ಆಠ್ | ಎಂಟು |
| ನೋವ್, ನೌ | ಒಂಬತ್ತು |
| ದಸ್ | ಹತ್ತು |

ಹಿಂದಿ ಭಾಷೆಯಲ್ಲಿನ ಮೂಲ ಸಂಖ್ಯಾವಾಚಕಗಳು ಇಲ್ಲಿ ಕಂಡು ಬರುತ್ತವೆ. ಆದರೆ 'ಛೋ' ಪ್ರಯೋಗವು ಹಿಂದಿಯ 'ಚೇ' ಎಂಬ ಉಚ್ಚಾರಣೆಗೆ ಸಮಾನವಾದುದಾಗಿದೆ. ಇದು ಲಂಬಾಣಿ ಭಾಷೆಯಲ್ಲಿ 'ಚೋ', 'ಛೋ' ಎಂಬ ರೀತಿಯಲ್ಲಿ ಬಳಕೆಯಲ್ಲಿದೆ. ರಾಜಸ್ಥಾನಿ ಭಾಷೆಯಲ್ಲಿಯೂ 'ಓ' ಕಾರಾಂತವಾಗಿ ಕೊನೆಗೊಳ್ಳುತ್ತದೆ. ದಕ್ಷಿಣ ಭಾರತದಲ್ಲಿ 'ಚ' ಕಾರ ಧ್ವನಿ ತಾಲವ್ಯ ಲಕ್ಷಣವನ್ನು ಹೊಂದುತ್ತದೆ.

**೧೧ ನಂತರ ಸಂಖ್ಯೆಗಳು :**

೧೧: ಹೊನ್ನೊಂದು ಆಂಧ್ರಪ್ರದೇಶದಲ್ಲಿ 'ಅಗ್ಯಾರ್' ಎಂದು ಕರ್ನಾಟಕದಲ್ಲಿ ಬಹುತೇಕ ಜಿಲ್ಲೆಗಲ್ಲಿ 'ಗ್ಯಾರ್' ಎಂದು ಬಳಕೆಯಲ್ಲಿದೆ.

೧೨: ಹನ್ನೆರೆಡು ಎಂಬುದು ಆಂಧ್ರಪ್ರದೇಶದಲ್ಲಿ 'ಬಾರ್' ಎಂದು ಕರ್ನಾಟಕದಲ್ಲಿ 'ಬಾರಾ' ಎಂದು ಬಳಕೆಯಲ್ಲಿದೆ.

ಈ ಕೆಳಗೆ ಕರ್ನಾಟಕ ಮತ್ತು ಆಂಧ್ರಪ್ರದೇಶದಲ್ಲಿ ಹತ್ತರ ಅನಂತರದ ಸಂಖ್ಯೆಗಳ ಉಚ್ಚಾರಣೆಯನ್ನು ನೀಡಲಾಗಿದೆ.

| | ಕರ್ನಾಟಕ | | | | ಆಂಧ್ರಪ್ರದೇಶ |
|---|---|---|---|---|---|
| ೧೩ | : | ತೇರಾ/ತೇರ್/ತೇರೆ | - | ೧೩ : | ತೇರ್ |
| ೧೪ | : | ಚೌದಾ/ಚಾದ್/ಚೌದ್/ಚೌದೆ/ಚೌಧಾ | - | ೧೪ : | ಚೌದಾ |
| ೧೫ | : | ಪಂದ್ರ/ಪಂದ್ರಿ/ಪಂದ್ರೆ | - | ೧೫ : | ಪಂದರ್/ಪಂದ್ರಿ |
| ೧೬ | : | ಸೋಳಾ/ಸೋಲೆ/ಸೋಲ | - | ೧೬ : | ಷೋಳ್ |
| ೧೭ | : | ಸತ್ರಾ/ಸತ್ರ್/ಸತ್ರೆ | - | ೧೭ : | ಸತ್ತರೆ/ಸತ್ರ |
| ೧೮ | : | ಅಠರಾ/ಅಟ್ರ/ಅಠ್ಠರ್/ಅಠ್ಠಾರೆ | - | ೧೮ : | ಅಠ್ಠರ್/ಅಟ್ಟಾರೆ |
| ೧೯ | : | ವನ್ನಿಸ್/ಒಗ್ನಿಸ್/ಒಗೋಣಿಸ್/ಉನ್ನಿಸ್ | - | ೧೯ : | ವಗ್ನೀಸ್ |
| ೨೦ | : | ವೀಸ್/ಇಸ್/ಬೀಸ್ | - | ೨೦ : | ವೀಸ್ |
| ೨೧ | : | ~~ಏಕ್ ವೀಸ್~~ / [illegible] | - | ೨೧ : | ವೀಸನ್ ಏಕ್ |

ಈ ಮೇಲಿನ ಅಗ್ಯಾರಾ, ಅಠರ್, ವನ್ನಿಸ್ ಎನ್ನುವ ರೂಪಗಳು ಲಂಬಾಣಿ ಭಾಷೆಯಲ್ಲಿ ಇತರ ಭಾಷೆಯ ಸಂಪರ್ಕದ ಪ್ರಭಾವದಿಂದಾಗಿ ಕೆಲವು ವ್ಯತ್ಯಾಸಗಳು ಕಂಡುಬರುವುದು ಸಹಜ. ಇವೇ ಲಂಬಾಣಿ ಭಾಷೆಯ ಪ್ರಾಚೀನ ರೂಪಗಳೆಂದು ಡಾ.ಎಚ್.ಎಸ್.ಬ್ರಹ್ಮಾನಂದ (೧೯೯೧.೧೨೪) ಅವರ ಅಭಿಮತವಾಗಿದೆ.

೨೧ : ವೀಸನ್ಏಕ್, ವೀಸನೇಕ್, ಎಕವೀಸ್, ಇಕ್ಕಿಏಸ್, ಎಕ್ಕೀಸ್, ಅಕ್ವೀಸ್,

೩೧ : ಏಕ್ಪರ್ತೀಸ್, ಏಕ್ತೀಸ್, ತೀಸನ್ ಏಕ್

೩೫ : ಪಚ್ತೀಸ್, ಪೈಂತೀಸ್, ತೀಸೇಪರ್ಪಾಂಚ್, ತೀಸನ್ ಪಾಚ್

ಈ ಮೇಲಿನ ಸಂಖ್ಯಾವಾಚಿ ರೂಪಗಳನ್ನು ಗಮನಿಸಿದಾಗ ಲಂಬಾಣಿ ಭಾಷೆಯಲ್ಲಿ ಹಿಂದೀ ಭಾಷೆಗಿಂತಲೂ ಪ್ರಾಚೀನ ರೂಪಗಳಿರುವುದು ಖಚಿತವಾಗಿದೆ ಎಂದು ಪ್ರೊ.ಪಿ.ಕೆ.ಖಂಡೋಬಾ ಅವರು (ಸಂಸ್ಕೃತಿ ಶೋಧ; ೨೦೦೫; ಪು.೨೨)ರಲ್ಲಿ ಅವರು ಅಭಿಪ್ರಾಯ ಪಟ್ಟಿದ್ದಾರೆ. ಈ ಮೇಲಿನ ಎರಡು ರಾಜ್ಯಗಳಲ್ಲಿ ಲಂಬಾಣಿಗರು ಬಳಸುವ ಸಂಖ್ಯಾವಾಚಕಗಳಾದ (೨೧,೧,೨) ಎಂಬ ರೂಪಗಳು ದ್ರಾವಿಡ ಭಾಷಾ ಸಂಪರ್ಕದಿಂದಾಗಿ ಬೇರೆ ರೂಪವನ್ನೇ ಪಡೆದಿದೆ. (೨೦+೧) ಈ ಪದ್ಧತಿ ದ್ರಾವಿಡ ಭಾಷೆಗಳಲ್ಲಿದೆ. 'ಕನ್ನಡದ ಇಪ್ಪತ್ತೊಂದು, ತೆಲುಗು, ಇರವೈಒಕ್ಕಟಿ' ಇದೇ ರೀತಿ ೨೯ರ ವರೆಗೂ ಮುಂದುವರಿಯುತ್ತದೆ. ಆದರೆ ಉತ್ತರ ಭಾರತದಲ್ಲಿ '೧+೨೦' ಎಂಬ ಪದ್ಧತಿ ಇದೆ. ಹಿಂದೀಯಲ್ಲಿ 'ಇಕ್ಕಿಸ್' ಆಂಧ್ರಪ್ರದೇಶದ ತೆಲಂಗಾಣ ಪ್ರಾಂತ್ಯದಲ್ಲಿ ಅಕ್ವೀಸ್, ಬಾವೀಸ್, ತೇವಿಸ್, ಚೋವೀಸ್, ಎಂಬ ರೂಪ ಬಳಕೆಯಲ್ಲಿವೆ.

ಹಿಂದಿಯಲ್ಲಿ 'ವೀಸ್' ಎಂಬ ಪದದ ಆದಿಯಲ್ಲಿ 'ವ' ಕಾರವು ಸಂದಿಯಲ್ಲಿ ಲೋಪವಾಗುತ್ತದೆ. (ಇರ್+ವೀಸ್> ಇಕ್ಕೀಸ್) ಆದರೆ ಮೇಲಿನ ರೂಪಗಳಲ್ಲಿ 'ವ' ಕಾರ ಲೋಪವಾಗಿಲ್ಲ. ಅವು ಲಂಬಾಣಿ ಭಾಷೆ ಪ್ರಾಚೀನ ರೂಪಗಳು. ಆದುದರಿಂದಲೇ ಅವು ಹಾಗೇ ಉಳಿದುಕೊಂಡಿದೆ. ೨೧ ರಿಂದ ವೀಸನ್ಏಕ್ ಅಥವಾ ವೀಸನೇಕ್, ವೀಸನ್ ದೀ, ಈ ರೀತಿ ೨೮ರ ವರೆಗೆ ಏಣಿಕೆ ಮಾಡಲಾಗುತ್ತದೆ. ೨೮ (ವೀಸನ್ ಆಟ) ಎಂದು ಹಾಗೆಯೇ ೩೧ ರಿಂದ ೮೮ ರವರೆಗೆ ಮೇಲಿನಂತೆ ಏಣಿಕೆ ಮಾಡಲಾಗುತ್ತದೆ. ಆದರೆ ೯೦ ರ ನಂತರ ೧೦೦ ಕ್ಕೆ ಎಷ್ಟು ಕಡಿಮೆಯಾಗುತ್ತದೆ ಎರು ಏಣಿಸಲಾಗುತ್ತದೆ.

| ಕರ್ನಾಟಕದಲ್ಲಿ | | | ಆಂಧ್ರಪ್ರದೇಶದಲ್ಲಿ |
|---|---|---|---|
| ೩೦ | ; | ತೀಸ್ | ತಿಸ್ |
| ೪೦ | ; | ಚಾಳೀಸ್ | ಚಾಳಿಸ್ |
| ೫೦ | ; | ಪಚಾಸ್ | ಪಚಾಸ್ |
| ೬೦ | ; | ಸಾಟ್ | ಸಾಟ್ |
| ೭೦ | ; | ಸತ್‌ರ್ | ಸಾಟ್‌ಸತ್ತರ್ |
| ೮೦ | ; | ಅಸ್ಸಿ | ಅಸ್ಸಿ |
| ೯೦ | ; | ನವ್ವದ್ | ನ್ಯವ್, ನವ್ವದ್ |
| ೧೦೦ | ; | ಸೋ | ಏಕಸೋ |

ಈ ಮೇಲಿನ ಸಂಖ್ಯೆಯಲ್ಲಿ ಚಾಳಿಸ್ ಸಂಖ್ಯಾವಾಚಕ ಪದಗಳಲ್ಲಿ ಮೂರ್ಧನ್ಯ (ಲ>ಳ) ಧ್ವನಿಯು ವಿಶಿಷ್ಟವಾದ ಲಕ್ಷಣ ನವ್ಯ್ ನಬ್ಬೆಗಿಂತಲೂ ಪ್ರಾಚೀನ ರೂಪವಾಗಿದೆ. ಈ ರೀತಿ ೧೦೦ ಕ್ಕೆ ಎಷ್ಟು ಕಡಿಮೆ ಎಂದು ಎಣಿಸಲಾಗಿದೆ. ಕನ್ನಡ ಭಾಷೆಯಲ್ಲಿ ಒಂಬತ್ತು ಸಂಕ್ಯಾವಾಚಕವನ್ನು ಇದೇ ರೀತಿ ಏಣಿಸಲಾಗುತ್ತದೆ. (ಒನ್+ಪತ್ತು) ಒಂಬತ್ತು ಒಂದರ ಕಡಿಮೆ ಹತ್ತು ಎಂದಾಗಿದೆ. ಕನ್ನಡದಲ್ಲಿ (೧೦ ರಿಂದ ೧೦೦) ಸಂಖ್ಯೆಗಳು ಕೂಡುವುದು ಅಥವಾ ಗುಣಿಸುವುದರಿಂದ ಹುಟ್ಟುತ್ತವೆ. ಉದಾಹರಣೆಗೆ; ಹತ್ತು + ಒಂದು = ಹನ್ನೊಂದು, ಇರ್ + ಪತ್ತು = ಇಪ್ಪತ್ತು. ಇದೇ ರೀತಿ ಲಂಬಾಣಿ ಭಾಷೆಯಲ್ಲಿಯೂ ಕೂಡ ೧ ರಿಂದ ೯ ರವರೆಗಿನ ಸಂಖ್ಯೆಗಳು ಕೂಡುವುದು ಮತ್ತು ಗುಣಿಸುವುದರಿಂದ ಹುಟ್ಟುತ್ತವೆ. ಆದರೆ ೯೦ ರಿಂದ ೧೦೦ ವರೆಗಿನ ಸಂಖ್ಯೆಗಳು ಕಳೆಯುವುದರಿಂದ ಹುಟ್ಟುತ್ತದೆ. ಇದು ಲಂಬಾಣಿ ಭಾಷೆಯ ವೈಶಿಷ್ಟ್ಯ ಎನ್ನಬಹುದು. ಕನ್ನಡ ಭಾಷೆಯಲ್ಲಿ ಹತ್ತು, ಇಪ್ಪತ್ತು, ಮೂವತ್ತು, ಎಂದು ನೂರರವರೆಗೆ 'ಪಟ್ಟು'ಗಳು ಕಂಡು ಬರುತ್ತವೆ. ಅದೇ ರೀತಿ ಲಂಬಾಣಿ ಭಾಷೆಯಲ್ಲಿ 'ಪಟ್ಟು' ಎಂಬುವುದು 'ಪರ್' ಎನ್ನಲಾಗುವುದು. ಅದಕ್ಕೆ ಹೆಚ್ಚಿಸುವುದು ಎಂದರ್ಥ. 'ದುಪ್ಪಟ್ಟು' 'ಎರಡು ಪಟ್ಟು' ಎಂದು ಕೂಡ ಕರೆಯುತ್ತಾರೆ. ಕನ್ನಡ ಭಾಷೆಯಲ್ಲಿ 'ನೇಯ' ಎಂಬ ಪ್ರತ್ಯಯವನ್ನು ಹೊಂದಿದ ಸಂಖ್ಯಾವಾಚಕ ಶಬ್ದಗಳು ನಾಮಪದಗಳಿಗೆ ವಿಶೇಷಣಗಳಾಗಿ ಬರುತ್ತವೆ.

**ಉದಾಹರಣೆಗೆ;**

ಒಂದನೆಯ, ಎರಡನೆಯ, ಮೂರನೆಯ, ಇತ್ಯಾದಿ, ಲಂಬಾಣಿ ಭಾಷೆಯಲ್ಲಿ ಏಕನೇ, ದೀನೆ, ಚಾರೆ, ಪಾಂಚೆ, ಚೊವೆ, ಮುಂತಾದವುಗಳು ನೋಡಬಹುದು. ಅಂದರೆ ಇಲ್ಲಿ 'ಆನೆಯ' ಪ್ರತ್ಯಯದ ಬದಲು 'ನೇ' ಎಂಬ ಪ್ರತ್ಯಯ ಲಂಬಾಣಿ ಭಾಷೆಯ ಸಂಖ್ಯಾವಾಚಕದಲ್ಲಿ ಬರುವುದನ್ನು ಕಾಣಬಹುದು. ಅಷ್ಟೇ ಅಲ್ಲದೆ ಲಂಬಾಣಿ ಭಾಷೆಯಲ್ಲಿ 'ಪಯಲ' ಎಂದರೆ ಮೊದಲನೆ ಎಂದರ್ಥ. ಇದನ್ನು ಪುಲ್ಲಿಂಗವಾಚಿಗಳಿಗೆ ಮಾತ್ರ ಬಳಸಲಾಗುತ್ತದೆ. ಸ್ತ್ರೀಲಿಂಗವಾಚಿಗಳಿಗೆ 'ಪಯಲೀ' ಎಂದು ಬಳಸುತ್ತಾರೆ.

**ಉದಾಹರಣೆಗೆ;**

| ಪುಲ್ಲಿಂಗ | ಸ್ತ್ರೀಲಿಂಗ |
|---|---|
| ಪಯಲಾ | ಪಯಲೀ |
| ದೂಸರಾ | ದುಸರೀ |
| ತೀಸರಾ | ತೀಸರೀ |
| ಚೌತಾ | ಚೌತೀ |
| ಪಾಚ್‌ವಾ (೦) | ಪಾಚ್‌ವೀ (೦) |

ಮುಂತಾದವುಗಳನ್ನು ನೋಡಬಹುದು.

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದರೆ ಪುಲ್ಲಿಂಗ ಇರುವ ಸಂಖ್ಯಾವಾಚಕಗಳಲ್ಲಿ 'ಆ' ಪ್ರತ್ಯಯದಿಂದ ಅಂತ್ಯಗೊಂಡರೆ, ಸ್ತ್ರೀಲಿಂಗವಿರುವ ಸಂಖ್ಯಾವಾಚಕಗಳೆಲ್ಲಾ 'ಈ' ಕಾರಂತ್ಯದಿಂದ ಕೊನೆಗೊಳ್ಳುತ್ತವೆ. ಕನ್ನಡ ಭಾಷೆಯಲ್ಲಿ ಬಳಸುವ 'ಬಾರಿ' 'ಸಲ' ಎಂಬುವುದನ್ನು ಲಂಬಾಣಿ ಭಾಷೆಯಲ್ಲಿ 'ಸಲಾ' 'ವಳಾ' ಎಂದು ಬಳಸುತ್ತಾರೆ. 'ಸಲಾ' 'ವಳಾ' ಗಳನ್ನು ಜನಾಂಗ ಸಮಯಕ್ಕೆ ಸಮವಾಗಿ ಬಳಲಾಗುತ್ತದೆ.

**ಉದಾಹರಣೆಗೆ;**

| **ಕನ್ನಡ ಭಾಷೆ** | **ಲಂಬಾಣಿ ಭಾಷೆ** |
|---|---|
| ಒಂದನೇಯ ಸಲ | ಏಕ್ ಸಲ್ಲಾ ವಳಾ |
| ಒಂದನೇ ಸಲ | ಏಕ್ ವಳಾ |
| ಎರಡನೇ ಬಾರಿ | ದೀಸ್‌ಲಾ |
| ಎರಡನೇ ಸಲ | ದೀವಳಾ |

ಹಾಗೆಯೇ ಒಂದನೇ, ಎರಡನೇ, ಎಂಬುವುದಕ್ಕೆ ಏಕ್, ದೀ, ಎಂದೇ ಬಳಸಲಾಗುತ್ತದೆ. ಹಾಗೆಯೇ ಲಂಬಾಣಿ ಭಾಷೆಯಲ್ಲಿ 'ಪಾತ್' ಎಂದರೆ 'ಸಾಲು' ಎಂದರ್ಥ. ಅಂದರೆ ಕನ್ನಡ ಭಾಷೆಯಲ್ಲಿ 'ಒಂದನೇ ಸಾಲು' 'ಎರಡನೇ ಸಾಲು' 'ಮೂರನೇ ಸಾಲು' ಎಂಬುವುದಕ್ಕೆ ಲಂಬಾಣಿ ಭಾಷೆಯಲ್ಲಿ 'ಏಕಪಾತ್' 'ದೀಪಾತ್' 'ತೀನ್‌ಪಾತ್' 'ಚಾರ್ ಪಾತ್' ಎಂದು ಬಳಸುತ್ತಾರೆ. ಇಲ್ಲಿ 'ನೇ' ಎಂಬ ಪ್ರತ್ಯಯ ಪ್ರಯೋಗ ಇಲ್ಲ.

ಕನ್ನಡದಲ್ಲಿ 'ಮಡಿ' ಎಂಬ ಪ್ರತ್ಯಯವು ಪ್ರಯೋಗವಾಗುತ್ತದೆ. ಉದಾಹರಣೆಗೆ ನೂರ್ಮಡಿ, ಇಮ್ಮಡಿ, ನಾಲ್ಮಡಿ ಮುಂತಾದವುಗಳು ಆದರೆ ಲಂಬಾಣಿ ಭಾಷೆಯಲ್ಲಿ 'ಮಡಿ' ಎಂಬ ಪ್ರತ್ಯಯಕ್ಕೆ ಸಮವಾಗಿ ಯಾವುದೇ ಪ್ರತ್ಯಯ ಇಲ್ಲ. ಆದರೆ ಹಿಂದೆ ಹೇಳಿದ 'ಪರ್' 'ಪಟ್ಟು' 'ದುಪಟ್ಟು' ಎನ್ನುವ ಪ್ರತ್ಯಯವೇ 'ಮಡಿ' ಎಂಬ ಪ್ರತ್ಯಯಕ್ಕೆ ಹೊಂದಿಕೆಯಾಗುತ್ತದೆ. ಹಾಗೆಯೇ ಲಂಬಾಣಿಗರು ಲೆಕ್ಕ ಹಾಕುವಾಗ, ಏಣಿಸುವಾಗ, ಸಾಮಾನ್ಯವಾಗಿ '೨೦' ಅಂಕಿಯಿಂದ ಏಣಿಸುತ್ತಾರೆ.

**ಉದಾಹರಣೆ;**

| | | |
|---|---|---|
| ದೀ ವೀಸ್ | ೪೦ | ಎರಡು ಇಪ್ಪತ್ತು |
| ತೀನ್ ವೀಸ್ | ೬೦ | ಮೂರು ಇಪ್ಪತ್ತು |
| ಛೋ/ಚೋ ವೀಸ್ | ೧೨೦ | ಆರು ಇಪ್ಪತ್ತು |

ಹೀಗೆ ಲಂಬಾಣಿ ಭಾಷೆಯಲ್ಲಿ ಸಂಖ್ಯಾವಾಚಕಗಳು ಕನ್ನಡ ಭಾಷೆಯ ಸಂಖ್ಯಾವಾಚಕಗಳಿಂದ ಕೊಂಚ ಭಿನ್ನವೆನಿಸಿದರೂ ಎರಡರಲ್ಲೂ ಸಾಮ್ಯತೆ ಇರುವುದನ್ನು ಕಾಣಬಹುದು. ಇದರಿಂದ ಲಂಬಾಣಿ ಭಾಷೆಯ ಸಂಖ್ಯಾವಾಚಕಗಳ ಮೇಲೆ ಕನ್ನಡ ಭಾಷೆಯ ಪ್ರಭಾವವಾಗಿರುವುದನ್ನು ಸ್ಪಷ್ಟವಾಗಿ ಗಮನಿಸಬಹುದು.

**ಉದಾಹರಣೆ;**

೧೦೦ = ಸೋ/ಸೌ, ೧,೦೦೦ = ಹಜಾರ್, ೧೦,೦೦೦ = ದಸ್ ಹಜಾರ್, ೧,೦೦೦೦೦ = ಲಾಕ್, ೧೦,೦೦೦೦=ದಸ್‌ಲಾಕ್, ೧೦೦೦೦೦೦೦ = ಕರೋಡ್/ಕೊಟ್/ಸೋಲಾಕ್ ಈ ಸಂಖ್ಯಾವಾಚಕಗಳು ಭಾರತದಾದ್ಯಂತ ಪ್ರಚಲಿತ ವಿರುವ ಲಂಬಾಣಿ ಭಾಷೆಯಲ್ಲಿ ಸಮಾನ ರೂಪಗಳನ್ನೇ ಹೊಂದಿವೆ.

**ಭಿನ್ನಾಂಶಗಳು:**

| | |
|---|---|
| ಪಾವ್ | ೧/೪ |
| ಪೂನಾದಿ | ೧ ೩/೪ |
| ಸಾಡೇ | + ೧/೨ |

| | |
|---|---|
| ಸಾಡೇ ತೀನ್ | ೩ ೧/೨ |
| ಅಡಾಯಿ | ೨ ೧/೨ |
| ಆಧೊ/ಆಧಿ/ಆದಾ, | ೧/೪ |
| ಸವಾ | +೧/೪ |
| ಸವಾತೀನ್ | ೩ ೧/೪ |
| ಡೊಡ್/ದೇಡ್/ಧೇಡ್ | ೧ ೧/೨ |

೧/೪ ವಿಷಕವಾದ ವ್ಯತ್ಯಯ ವಿದೆ. ಆಂಧ್ರದಲ್ಲಿ ಚೌರಾನ್, ಬಾಗಮ್, (ರೂಪಾಯಿಯಲ್ಲಿ ನಾಲ್ಕಾಣೆ ಭಾಗ) ೧೬* ೪ = ೧ ಎಂಬುವುದು ವಾಡಿಕೆಯಲ್ಲಿ ಇದೆ. ೧-೩/೪ = (ಪುನಾ ದೀ) = ಕಾಲುಭಾಗ ಕಡಿಮೆ ಎರಡು.

ಈ ಮೇಲಿನ ಉದಾಹರಣೆಗಳಲ್ಲಿ ಹತ್ತು ಸಂಖ್ಯಾವಾಚಕ ವ್ಯವಕಲನವನ್ನು ಸೂಚಿಸುತ್ತದೆ. ಈ ಪದ್ದತಿ ಎಲ್ಲ ಪ್ರಾಂತ್ಯದಲ್ಲೂ ಚಾಲ್ತಿಯಲ್ಲಿದೆ.

**ಗುಣಾಕಾರ ಸಂಖ್ಯೆ:**

| | |
|---|---|
| ದೀಸೋ | (೨ x ೧೦೦ = ೨೦೦) |
| ಅಡಾಯಿಸೋ | (೨೧/೨ x ೧೦೦ = ೨೫೦) |

**ಇತರ ಸಂಖ್ಯಾವಾಚಕಗಳು;**

| | |
|---|---|
| ಏಕೇಕ್ | ಒಂದೊಂದು |
| ಆದೋಆದೊ | ಅರ್ಧ ಅರ್ಧ |
| ಸೋಸೋ | ನೂರ್ನೂರು |

**ಸಂಖ್ಯಾವಾಚಕಗಳ ಜೊತೆ ನಾಮವಾಚಕಗಳನ್ನು ಬಳಸಿ ಹೇಳುವುದು.**

**ಉದಾಹರಣೆಗೆ;**

| | |
|---|---|
| ಏಕ್ದೀ | ಒಂದೆರಡು |
| ತೀನ್ಚಾರ್ | ಮೂರ್ನಾಲ್ಕು |
| ಪಾಂಛೋ | ಐದಾರು |

**ಮೂಲ ಸಂಖ್ಯೆಗೆ 'ಇ' ಕಾರ ಸೇರಿಸಿ ಹೇಳುವುದು.**

**ಉದಾಹರಣೆಗೆ;**

ದೋಯಿ ಜಾರೇಚ್ = ಇಬ್ಬರು ಹೋಗುತ್ತಿದ್ದಾರೆ.

'ಬಳನ್' (ಕೂಡಿ) ಎನ್ನುವ ರೂಪ ಸೇರಿಸಿ ಹೇಳುವುದುಂಟು.

ದೋಯಿ ಬಳನ್ ಜಾರೇಚ್ = ಇಬ್ಬರೂ ಕೂಡಿ ಹೋಗುತ್ತಿದ್ದಾರೆ.

**ಒಂದು ಸಂಖ್ಯೆಗೆ ಇನ್ನೊಂದು ಸಂಖ್ಯೆ ಸೇರಿಸಿ ಹೇಳುವುದು.**

**ಉದಾಹರಣೆಗೆ;**

ವೀಸ್ + ಅನ್ + ಏಕ್ = ಏಕವೀಸ್ (೨೧) ಇದನ್ನು ವೀಸ್ ಪರ್ ಏಕ್ ಎಂದು ಸಹ ಕರೆಯುತ್ತಾರೆ. ಉತ್ತರ ಭಾರತದಲ್ಲಿ 'ಏಕವೀಸ್' ಎನ್ನು ರೂಪವಿದೆ. ಆದರೆ ದಕ್ಷಿಣ ಭಾರತದಲ್ಲಿ ಈ ರೂಪ ಇಲ್ಲ. ದ್ರಾವಿಡ ಭಾಷೆಗಳಲ್ಲಿ

೧೦ ರ ನಂತರದ ಸಂಖ್ಯೆಗಳನ್ನು ಏರಿಕೆಯ ಕ್ರಮದಲ್ಲಿ ಹೇಳಲಾಗುತ್ತದೆ. ಈ ಪ್ರಭಾವ ದಕ್ಷಿಣ ಭಾರತದ ಲಂಬಾಣಿಗರ ಭಾಷೆಯಲ್ಲಿ ಕೂಡ ಕಂಡು ಬರುತ್ತದೆ.

**ಉದಾಹರಣೆಗೆ;**

| | |
|---|---|
| ಏಕ್‌ಸೋದೀ | (೧೦೨) |
| ದೀಸೋತೀನ್ ಚಾರ್ | (೧೩೪) |
| ತೀನ್‌ಸೋ ಸತ್ತರ್ ಪರ್ ಪಾಂಚ್ | (೩೭೫) |
| ಸವಾಸೋ | (೧೨೫) |
| ಸವಾತೀನ್ | (೩ ೧/೪) |
| ಸಾಡೇ ತೀನ್ | (೩ ೧/೨) |

**ಆವೃತಿ ಸೂಚಕ:**

'ಒಂದು' ಸಲ ಎನ್ನುವ ಅರ್ಥದಲ್ಲಿರುವ ರೂಪಗಳನ್ನು ನೋಡುವುದಾದರೆ ಆಂದ್ರ ಪ್ರದೇಶದಲ್ಲಿ 'ಏಕ್' ಎಂದು ಕರ್ನಾಟಕದಲ್ಲಿಯೂ 'ಏಕ್' ಎಂದೂ ಬಳಕೆಯಲ್ಲಿದೆ. ಹಿಂದಿಯಲ್ಲಿ 'ಏಕಬಾರ್' ಎನ್ನುವ ಪ್ರಯೋಗವಿದೆ. 'ವ/ಬ' ಪ್ರಕ್ರಿಯೆಯಿಂದ ಬಾರ್ ಆಗಿದೆ ಒಬ್ಬರಾಗಿ/ಒಬ್ಬಳಾಗಿ ಎನ್ನುವ ಅರ್ಥದಲ್ಲಿ ಏಕ್‌ಲೋ/ ಏಕ್‌ಲೀ ಅನ್ನುವ ರೂಪಗಳಿವೆ. ಈ ಸಂಖ್ಯಾವಾಚಕಗಳನ್ನು ಗಮನಿಸಿದಾಗ ಲಂಬಾಣಿ ಭಾಷೆಯಲ್ಲಿ ಹಿಂದೀ ಭಾಷೆಗಿಂತಲೂ ಪ್ರಾಚೀನ ಲಕ್ಷಣಗಳಿವೆ. ಈ ಅಂಶಗಳು ಹಿಂದೀ ಭಾಷಾ ಚರಿತ್ರೆಯನ್ನು ಪುನಾ ರಚಿಸುವವರಿಗೆ ಅಮೂಲ್ಯವಾದ ಮೂಲ ಸಾಮಗ್ರಿಗಳಾಗಿ ನೆರವಾಗುತ್ತವೆ.

■

## ಅಧ್ಯಾಯ - ೭

# ಲಂಬಾಣಿಭಾಷೆ: ಕ್ರಿಯಾಪದ ಮತ್ತು ಕ್ರಿಯಾವಿಶೇಷಣಗಳು

ಕ್ರಿಯಾಪದಗಳ ಹಿಂದೆ ಕಾಲವಾಚಕ ಪ್ರತ್ಯಯವೂ ಅವುಗಳ ಹಿಂದೆ ಪುರುಷವಾಚಕ (ಆಖ್ಯಾತ) ಪ್ರತ್ಯಯಗಳೂ ಸೇರುತ್ತವೆ. ಪುರುಷವಾಚಕಗಳು ಸೇರುವ ರೂಪಗಳು ಪೂರ್ಣರೂಪಗಳೆಂದೂ, ಅವುಗಳು ಸೇರದ ರೂಪಗಳು ಅಪೂರ್ಣರೂಪಗಳೆಂದೂ, ಪರಿಗಣಿಸಬಹುದು. ಪೂರ್ಣ ಹಾಗೂ ಅಪೂರ್ಣ ರೂಪಗಳು ನಿಶ್ಚಿಯಾರ್ಥಕ ಹಾಗೂ ನಿಷೇಧಾರ್ಥಕ ರೂಪಗಳಾಗಿರುತ್ತವೆ. ಭೂತ (ಸರಳ ಭೂತ ಹಾಗೂ ಸಂಪೂರ್ಣ ವರ್ತಮಾನ) ಕಾಲ, ಅಭೂತ ಕಾಲ, ವಿದ್ಯಾರ್ಥಕ ಹಾಗೂ ಪಕ್ಷಾರ್ಥಕ ಕ್ರಿಯಾನ್ಯೂನ ರೂಪಗಳು ಪೂರ್ಣರೂಪಗಳಾಗಿರುತ್ತವೆ. ಭಾವರೂಪ, ಕ್ರಿಯಾ ವಿಶೇಷಣ ರೂಪ, ನಾಮ ವಿಶೇಷಣಾ ರೂಪಗಳು ಅಪೂರ್ಣ ರೂಪಗಳಾಗಿರುತ್ತವೆ.

**ಕ್ರಿಯಾಪದಗಳ ವಿಂಗಡಣೆ:**

ಭೂತಕಾಲ (ಸರಳ ಭೂತಕಾಲ ಹಾಗೂ ಪೂರ್ಣವರ್ತಮಾನಕಾಲ) ಸೂಚಿತವಾಗಿ ಸೇರುವ ಪ್ರತ್ಯಯದ ಮೇಲೆ ಹೊಂದಿಕೊಂಡು ಕ್ರಿಯಾಪದಗಳನ್ನು ನಾಲ್ಕು ವರ್ಗಗಳಲ್ಲಿ ವಿಂಗಡಿಸಲಾಗಿದೆ. ಅವುಗಳನ್ನು ಕೆಳಗಿನಂತೆ ನೋಡಬಹುದು.

ವರ್ಗ ೧.

ಈ ವರ್ಗಕ್ಕೆ ಸೇರುವ ಸರಳ ಕ್ರಿಯಾಪದಗಳು ಸರಳ ಭೂತಕಾಲ ಸೂಚಿತ 'ಅನ್' ಪ್ರತ್ಯಯನ್ನು ಹೊಂದುತ್ತವೆ. ಅವುಗಳನ್ನು ಕೆಳಗಡೆ ಕೊಡಲಾಗಿದೆ.

೧. **ಪೂರ್ಣಕ್ರಿಯಾರೂಪಗಳು:**

೧.೧ (ಅ)

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ | ಪ್ರತ್ಯಯ |
|---|---|---|---|---|
| ಮರ್ | ಸಾಯು | ಮರನ್ | ಸತ್ತು | 'ಅನ್' |
| ಲಾ | ತರು | ಲಾನ್ | ತಂದು | 'ಅನ್' |
| ಆ | ಬರು | ಆನ್ | ಬಂದು | 'ಅನ್' |

೧.೨ (ಅ)

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ | ಪ್ರತ್ಯಯ |
|---|---|---|---|---|
| ಖೋದ್ | ಅಗೆ | ಖೋದನ್ | ಅಗೆದು | 'ಅನ್' |
| ಕರ್ | ಮಾಡು | ಕರನ್ | ಮಾಡಿ | 'ಅನ್' |

| | | | | |
|---|---|---|---|---|
| ಸೀಕ್ | ಕಲಿ | ಸೀಕನ್ | ಕಲಿತು | 'ಅನ್' |
| ಪಾಡ್ | ಎತ್ತು | ಪಾಡನ್ | ಎತ್ತಿ | 'ಅನ್' |
| ದಖೇಲ್ | ತಳ್ಳು | ದಖೇಲನ್ | ತಳ್ಳಿ | 'ಅನ್' |
| ಫೂಕ್ | ಊದು | ಫೂಕನ್ | ಊದಿ | 'ಅನ್' |
| ರಕಾಡ್ | ಉಳಿಸು | ರಕಾಡನ್ | ಉಳಿಸಿ | 'ಅನ್' |
| ಚಾಲ್ | ನಡೆ | ಚಾಲನ್ | ನಡೆದು | 'ಅನ್' |
| ಲಂಗ್ | ದಾಟು | ಲಂಗನ್ | ದಾಟಿ | 'ಅನ್' |
| ಮಾಪ್ | ಅಳತೆ | ಮಾಪನ್ | ಅಳೆದು | 'ಅನ್' |
| ಫಾಡ್ | ಹರಿ | ಫಾಡನ್ | ಹರಿದು | 'ಅನ್' |
| ನೀತಾರ್ | ಸುರಿ | ನೀತಾಣ್ | ಸುರಿದು | 'ಅನ್' |
| ಕುಟ್ | ಕುಟ್ಟು | ಕುಟನ್ | ಕುಟ್ಟಿ | 'ಅನ್' |
| ಭೋಡ್ | ಬಿಡು | ಭೋಡನ್ | ಬಿಟ್ಟು | 'ಅನ್' |
| ಫೇಕ್ | ಎಸೆ | ಫೇಕನ್ | ಎಸೆದು | 'ಅನ್' |
| ವಾಟದೇಕ್ | ಕಾಯು | ವಾಟದೇಕನ್ | ಕಾದು | 'ಅನ್' |
| ಮಾರ್ | ಹೊಡೆ | ಮಾರನ್ | ಹೊಡೆದು | 'ಅನ್' |
| ಹಾರ್ | ಸೋಲು | ಹಾರನ್ | ಸೋತು | 'ಅನ್' |
| ನಾಚ್ | ಕುಣಿ | ನಾಚನ್ | ಕುಣಿದು | 'ಅನ್' |
| ಫೂಟ್ | ಒಡೆ | ಫೂಟನ್ | ಒಡೆದು | 'ಅನ್' |
| ಭೂಲ್ | ಮರೆ | ಭೂಲನ್ | ಮರೆತು | 'ಅನ್' |
| ಥೀಂಕ್ | ಸೀನು | ಥೀಂಕನ್ | ಸೀನು | 'ಅನ್' |
| ಖೇಛ್ | ಬಿಗಿ | ಖೇಛನ್ | ಬಿಗಿದು | 'ಅನ್' |
| ಕುದ್ | ಹಾರು | ಕುದನ್ | ಹಾರಿ | 'ಅನ್' |
| ದಾಂಸ್ | ಓಡು | ದಾಂಸನ್ | ಓಡಿ | 'ಅನ್' |
| ಜಿಂಕ್ | ಗೆಲ್ಲು | ಜಿಂಕನ್ | ಗೆದ್ದು | 'ಅನ್' |
| ರೋ | ಅಳು | ರೋನ್ | ಅತ್ತು | 'ಅನ್' |
| ಭೇಳ್ | ಕಲಿಸು | ಭೇಳನ್ | ಕಲಿಸು | 'ಅನ್' |
| ಖೀಚ್ | ಎಳೆ | ಖೀಚನ್ | ಎಳೆದು | 'ಅನ್' |
| ಉತರ್ | ಇಳಿ | ಉತರನ್ | ಇಳಿದು | 'ಅನ್' |
| ಚಡ್ | ಏರು | ಚಡನ್ | ಏರಿ | 'ಅನ್' |
| ಹಾಸ್ | ನಗು | ಹಾಸನ್ | ನಕ್ಕು | 'ಅನ್' |
| ಫೇಲಾ | ಚದರಿ | ಫೇಲಾನ್ | ಚದರಿಸಿ | 'ಅನ್' |
| ಬೂರ್ | ಮುಚ್ಚು | ಬೂರನ್ | ಮುಚ್ಚಿ | 'ಅನ್' |

| | | | | |
|---|---|---|---|---|
| ವಖಡ್ | ಕಿತ್ತು | ವಖಡನ್ | ಕಿತ್ತುತಗೆ | 'ಅನ್' |
| ಕಾಟ್ | ಕಡಿ | ಕಾಟನ್ | ಕಡಿದು | 'ಅನ್' |
| ಸೋ | ಮಲಗು | ಸೋನ್ | ಮಲಗಿ | 'ಅನ್' |

**ವರ್ಗ ೨.**

ಈ ವರ್ಗಕ್ಕೆ ಸೇರುವ ಕ್ರಿಯಾಪದಗಳು ಸರಳ ಭೂತಕಾಲ ಸೂಚಿತ ಪ್ರತ್ಯಯವನ್ನು ಪೂರ್ಣವರ್ತಮಾನ ಕಾಲ ಸೂಚಿತ ಪ್ರತ್ಯಯ 'ಅನ್' ವನ್ನು ಹೊಂದುತ್ತದೆ. ಅವುಗಳನ್ನು ಈ ಕೆಳಗಿನಂತೆ ಕೊಡಲಾಗಿದೆ.

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ | ಪ್ರತ್ಯಯ |
|---|---|---|---|---|
| ಮೇಲ್ | ಇಡು | ಮೇಲನ್ | ಇಟ್ಟು | 'ಅನ್' |
| ದೇಖ್ | ನೋಡು | ದೇಖನ್ | ನೋಡಿ | 'ಅನ್' |
| ಮಾರ್ | ಕೊಲ್ಲು | ಮಾರನ್ | ಕೊಂದು | 'ಅನ್' |
| ಪೀ | ಕುಡಿ | ಪೀನ್ | ಕುಡಿದು | 'ಅನ್' |
| ರೋ | ಅಳು | ರೋನ್ | ಅತ್ತು | 'ಅನ್' |
| ಬಾಂಡ್ | ಬೈಯು | ಬಾಂಡನ್ | ಬೈಯ್ದು | 'ಅನ್' |
| ಛೋಡ್ | ಬಿಡು | ಛೋಡನ್ | ಬಿಟ್ಟು | 'ಅನ್' |

**ಅಪೂರ್ಣ ಕ್ರಿಯಾಪದಗಳು:**

**ವರ್ಗ ೩.**

ಈ ವರ್ಗಕ್ಕೆ ಸೇರುವ ಕ್ರಿಯಾಪದಗಳೂ ಸರಳ ಭೂತಕಾಲ ಸೂಚಿತ ಪ್ರತ್ಯಯವನ್ನು ಪೂರ್ಣ 'ಅನ್' ವನ್ನು ಹೊಂದಿರುತ್ತದೆ. ಅವುಗಳನ್ನು ಕೆಳಗಿನಂತೆ ಕೊಡಲಾಗಿದೆ.

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ | ಪ್ರತ್ಯಯ |
|---|---|---|---|---|
| ಹೂಬರ್ | ನಿಲ್ಲು | ಹೂಬರನ್ | ನಿಂತು | 'ಅನ್' |
| ವೇಚ್ | ಮಾರು | ವೇಚನ್ | ಮಾರಿ | 'ಅನ್' |
| ವಾತೇಕರ್ | ಮಾತಾಡು | ವಾತೇಕರನ್ | ಮಾತಾಡಿ | 'ಅನ್' |
| ಧಾಸ್ | ಓಡು | ಧಾಸನ್ | ಓಡಿ | 'ಅನ್' |
| ಜನ್ಮ | ಹುಟ್ಟು | ಜನ್ಮನ್ | ಹುಟ್ಟಿ | 'ಅನ್' |
| ನಚೋ | ಹಿಂಡು | ನಚೋನ್ | ಹಿಂಡಿ | 'ಅನ್' |
| ವಾಚ್ | ಓದು | ವಾಚನ್ | ಓದಿ | 'ಅನ್' |
| ಬಾಂದ್ | ಕಟ್ಟು | ಬಾಂದನ್ | ಕಟ್ಟಿ | 'ಅನ್' |
| ವಾ | ಬಾಚು | ವಾನ್ | ಬಾಚಿ | 'ಅನ್' |
| ಸುಕಾ | ಬಾಡು | ಸುಕಾನ್ | ಬಾಡಿ | 'ಅನ್' |
| ಹುಬರ್ | ನಿಲ್ಲು | ಹುಬರನ್ | ನಿಂತು | 'ಅನ್' |
| ದುಂಡ್ | ಹುಡುಕು | ದುಂಡನ್ | ಹುಡುಕಿ | 'ಅನ್' |
| ಲಂಗ್ | ದಾಟು | ಲಂಗನ್ | ದಾಟಿ | 'ಅನ್' |

| | | | | |
|---|---|---|---|---|
| ಗಲ್ | ನುಂಗು | ಗಲನ್ | ನುಂಗಿ | 'ಅನ್' |
| ಲಗಾಡ್ | ಅಂಟು | ಲಗಾಡನ್ | ಅಂಟಿಸಿ | 'ಅನ್' |
| ಛೀಪ್ | ಮುಟ್ಟು | ಛೀಪನ್ | ಮುಟ್ಟಿ | 'ಅನ್' |
| ಮಾಂಗ್ | ಬೇಡು | ಮಾಂಗನ್ | ಬೇಡಿ | 'ಅನ್' |
| ಫೇಕ್ | ಒಗೆ | ಫೇಕನ್ | ಒಗೆದು | 'ಅನ್' |
| ಚಾಟ್ | ನೆಕ್ಕು | ಚಾಟನ್ | ನೆಕ್ಕಿ | 'ಅನ್' |
| ದಾಬ್ | ಒತ್ತು | ದಾಬನ್ | ಒತ್ತಿ | 'ಅನ್' |
| ಪಕಡ್ | ಹಿಡಿ | ಪಕಡನ್ | ಹಿಡಿದು | 'ಅನ್' |
| ಭಳ್ | ಸೇರು | ಭಳನ್ | ಸೇರಿ | 'ಅನ್' |

**ವರ್ಗ ೪.**

ಈ ವರ್ಗಕ್ಕೆ ಸೇರುವ ಕ್ರಿಯಾಪದಗಳು 'ಅನ್' ಎಂಬ ಪ್ರತ್ಯಯವನ್ನು ಹೊಂದುತ್ತದೆ. ಅವುಗಳನ್ನು ಕೆಳಗಡೆ ಕೊಡಲಾಗಿದೆ.

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ | ಪ್ರತ್ಯಯ |
|---|---|---|---|---|
| ಖೋ | ತಿನ್ನು | ಖಾನ್ | ತಿಂದು | 'ಅನ್' |
| ಸಮಜ್ | ತಿಳಿ | ಸಮಜನ್ | ತಿಳಿದು | 'ಅನ್' |
| ಖೋ | ಉಣ್ಣು | ಖಾನ್ | ಉಂಡಿ | 'ಅನ್' |
| ಕ | ಹೇಳು | ಕೇನ್ | ಹೇಳಿ | 'ಅನ್' |

ಹೀಗೆ ಲಂಬಾಣಿ ಭಾಷೆಯಲ್ಲಿ ಪೂರ್ಣ ಮತ್ತು ಅಪೂರ್ಣ ಕ್ರಿಯಾರೂಪಗಳೆರಡರಲ್ಲಿಯೂ 'ಅನ್' ಪ್ರತ್ಯಯವೇ ಪ್ರಯೋಗವಾಗುತ್ತದೆ.

**ಸಾಧಿತ ಕ್ರಿಯಾಪದಗಳು:**

ಲಂಬಾಣಿ ಭಾಷೆಯ ಕ್ರಿಯಾಪದಗಳಲ್ಲಿ ಅಕರ್ಮಕ, ಸಕರ್ಮಕ ಹಾಗೂ ಪ್ರೇರಣಾರ್ಥಕ ಕ್ರಿಯಾಪದಗಳೆಂದು ಮೂರು ವಿಧಗಳಿವೆ. ಆದರೆ ಸಕರ್ಮಕ ಹಾಗೂ ಪ್ರೇರಣಾರ್ಥ ಕ್ರಿಯಾಪದಗಳು ಮಾತ್ರ ಸಾಧಿತ ಕ್ರಿಯಾಪದಗಳಾಗಿರುತ್ತವೆ. ವಾಕ್ಯದಲ್ಲಿ ಕರ್ಮವನ್ನು ಕೆಲವು ಕ್ರಿಯಾಪದಗಳು ನೇರವಾಗಿ ಸ್ವೀಕರಿಸುತ್ತವೆ. (ಸಕರ್ಮ ಕ್ರಿಯಾಪದಗಳು) ಆದರೆ ಕೆಲವು ಕ್ರಿಯಾಪದಗಳು (ಅಕರ್ಮಕ ಕ್ರಿಯಾಪದಗಳು) ನೇರವಾಗಿ ಸ್ವೀಕರಿಸುವುದಿಲ್ಲ. ಕೆಲವೊಂದು ಕ್ರಿಯಾ ಪ್ರಕೃತಿಗಳು ಕರ್ಮ ಸೂಚಕ ಪ್ರತ್ಯಯಗಳನ್ನು ಹತ್ತಿಸಿ ಕೊಂಡಾಗ ಮಾತ್ರ ಆಗುವ ಸಕರ್ಮಕ ಕ್ರಿಯಾಪದಗಳನ್ನು ಸಾಧಿತ ಸಕರ್ಮಕ ಕ್ರಿಯಾಪದಗಳೆಂದು ಕರೆಯಬಹುದು. ಈ ರೀತಿ ಸಕರ್ಮಕ ಕ್ರಿಯಾಪದಗಳನ್ನು ಸಹಜ ಸಕರ್ಮಕ ಕ್ರಿಯಾಪದಗಳು (ಕರ್ಮ ಸೂಚಕ ಪ್ರತ್ಯಯವಿಲ್ಲದಿದ್ದರೂ ಸಕರ್ಮಕ ಅರ್ಥವನ್ನು ನೀಡುವ ಕ್ರಿಯಾಪದಗಳು) ಹಾಗೂ ಸಾಧಿತ ಸಕರ್ಮಕ ಕ್ರಿಯಾಪದ ಉಂಟಾಗುತ್ತದೆ. ಎಂಬುದನ್ನು ಇಲ್ಲಿ ಗಮನಿಸಬಹುದು. ಇವುಗಳಲ್ಲದೆ ಸರಳ ಮತ್ತು ಸಾಧಿತ ಸಕರ್ಮಕ ಕ್ರಿಯಾಪದಗಳಿಗೆ ಪ್ರತ್ಯಯ ಹಚ್ಚಿ ಪ್ರೇರಣಾರ್ಥಕ ಕ್ರಿಯಾಪದವನ್ನು ಪಡೆಯಬಹುದು. ಅವುಗಳ ರಚನೆಯನ್ನು ಈ ಕೆಳಗಿನಂತೆ ನೋಡಬಹುದು.

೧. ಅಕರ್ಮಕ ಕ್ರಿಯಾಪದ + ಸಕರ್ಮಕ ಪ್ರತ್ಯಯ = ಸಾಧಿತ ಸಕರ್ಮಕ ಕ್ರಿಯಾಪದ

**ಉದಾಹರಣೆ:**

ಪಚಾ (ಬೆಳೆಯು) + 'ವ್' ಸಕರ್ಮಕ ಪ್ರತ್ಯಯ = ಪಚಾವ್ (ಬೆಳಸು)

ಹಸ್ (ನಗು) + 'ಡ್' ಸಕರ್ಮಕ ಪ್ರತ್ಯಯ = ಹಸಾಡ್ (ನಗಿಸು)

೨. ಸರಳ ಸಕರ್ಮಕ ಕ್ರಿಯಾಪದ + ಪ್ರೇರಣಾರ್ಥಕ ಪ್ರತ್ಯಯ = ಪ್ರೇರಣಾರ್ಥಕ ಕ್ರಿಯಾಪದ

**ಉದಾಹರಣೆ:**

ಪೀ (ಕುಡಿ) + 'ಆ' ಪ್ರೇರಣಾರ್ಥಕ ಪ್ರತ್ಯಯ = ಪರಾ (ಕುಡಿಸು)

ಕರ್ (ಮಾಡು) + 'ಆ' ಪ್ರೇರಣಾರ್ಥಕ ಪ್ರತ್ಯಯ = ಕರಾ (ಮಾಡಿಸು)

೩. ಅಕರ್ಮಕ ಕ್ರಿಯಾಪದ + ಸಕರ್ಮಕ ಪ್ರತ್ಯಯ + ಪ್ರೇರಣಾರ್ಥಕ ಪ್ರತ್ಯಯ = ಪ್ರೇರಣಾರ್ಥಕ ಕ್ರಿಯಾಪದ

**ಉದಾಹರಣೆ:**

ಮಾರು (ಹೊಡೆಯು) + 'ಉ' ಸಕರ್ಮಕ ಪ್ರತ್ಯಯ 'ವ್' ಪ್ರೇರಣಾರ್ಥಕ ಪ್ರತ್ಯಯ = ಮರಾವ್(ಹೊಡೆಸು)

**ಅಕರ್ಮಕ ಕ್ರಿಯಾಪದಗಳು:**

**ಉದಾಹರಣೆ:**

| ಲಂಬಾಣಿ | ಕನ್ನಡ |
|---|---|
| ಹಂಸ್ | ನಗು |
| ದಾಂಸ್ | ಓಡು |
| ಚಾಲ್ | ನಡೆ |
| ರೇಗೊ | ಉಳಿ |
| ವಡ್ | ಹಾರು |

**ಸಕರ್ಮಕ ಕ್ರಿಯಾಪದಗಳು:**

| ಲಂಬಾಣಿ | ಕನ್ನಡ |
|---|---|
| ಛೋಡ್ | ಬಿಡು |
| ಖೋ | ತಿನ್ನು |
| ವೇಚ್ | ಹಂಚು |
| ಕರ್ | ಮಾಡು |
| ದ | ಕೊಡು |

**ಸಾಧಿತ ಸಕರ್ಮಕ ಕ್ರಿಯಾಪದಗಳು:**

ಕೆಲವೊಂದು ಅಕರ್ಮಕ ಕ್ರಿಯಾಪದಗಳಿಗೆ ಸಕರ್ಮಕ ಪ್ರತ್ಯಯವನ್ನು ಸೇರಿಸಿದಾಗ ಸಾಧಿತ ಸಕರ್ಮಕ ಕ್ರಿಯಾಪದಗಳಾಗುತ್ತವೆ.

**ಉದಾಹರಣೆ:**

| ಅಕರ್ಮಕ ಕ್ರಿಯಾಪದಗಳು | | ಸಕರ್ಮಕ ಕ್ರಿಯಾಪದಗಳು | ಸಾಧಿತಸಕರ್ಮಕ ಕ್ರಿಯಾಪದಗಳು | |
|---|---|---|---|---|
| **ಲಂಬಾಣಿ** | **ಕನ್ನಡ** | | **ಲಂಬಾಣಿ** | **ಕನ್ನಡ** |
| ಛೋಡ್ | ಬಿಡು | ಆ | ಛೋಡಾ | ಬಿಡಿಸು |
| ಚಾಲ್ | ನಡೆ | ಆ | ಚಲಾ | ನಡೆಸು |
| ಹಾರ್ | ಸೋಲು | ಆ | ಹರಾ | ಸೋಲಿಸು |
| ಹುಬರ್ | ನಿಲ್ಲು | ಆ | ಹುಬಾರ್ | ನಿಲ್ಲಿಸು |
| ಡೂಲ್ | ಮುಳುಗು | ಆ | ಡುಬಾ | ಮುಳುಗಿಸು |

ಲಂಬಾಣಿ ಭಾಷೆಯಲ್ಲಿ ಏಕಾಕ್ಷರ ಯುಕ್ತ ಧಾತುಗಳಲ್ಲಿ ಅಕರ್ಮಕ ಕ್ರಿಯಾಪದಗಳು ಸಕರ್ಮಕ ಕ್ರಿಯಾಪದಗಳಾದಾಗ ದ್ರಾವಿಡ ಭಾಷೆಗಳ ಹಾಗೆ ಪದಾಂತ್ಯದಲ್ಲಿ ಪ್ರತ್ಯಯ ಪರವಾಗುವ ಬದಲಾಗಿ ಪದರಚನೆಯಲ್ಲೇ ವ್ಯತ್ಯಾಸಗಳಾಗುತ್ತವೆ.

**ಪ್ರೇರಣಾರ್ಥಕ ಕ್ರಿಯಾಪದಗಳು:**

ಪ್ರೇರಣಾರ್ಥಕ ಪ್ರತ್ಯಯಗಳು 'ಆ' ವನ್ನು ಸಕರ್ಮಕ ಕ್ರಿಯಾಪದ ರೂಪಗಳಿಗೆ (ಸರಳ ಹಾಗೂ ಸಾಧಿತ) ಸೇರಿದಾಗ ಪ್ರೇರಣಾರ್ಥಕ ರೂಪಗಳು ದೊರೆಯುತ್ತದೆ.

**ಉದಾಹರಣೆ:**

| | ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|---|
| ಆ: | ಮೇಲ್ | ಇಡು | ಮೇಲಾ | ಇಡಿಸು |
| | ಮಾರ್ | ಹೊಡೆ | ಮರಾ | ಹೊಡೆಸು |
| | ಮಾರ್ | ಕೊಲ್ಲು | ಮರಾ | ಕೊಲ್ಲಿಸು |
| | ಕರ್ | ಮಾಡು | ಕರಾ | ಮಾಡಿಸು |
| | ಫಾಲ್ | ಹಾಕು | ಫುಲಾ | ಹಾಕಿಸು |
| | ವೇಚ್ | ಮಾರು | ವೇಚಾ | ಮಾರಿಸು |
| | ಫೇಕ್ | ಬಿಸಾಕು | ಫೇಡಾ | ಬಿಸಾಕು |

**ಕ್ರಿಯಾಪದ**

ಈ ಭಾಷೆಯಲ್ಲಿ ಕ್ರಿಯಾಪದಗಳು ಬಹಳ ವೈವಿಧ್ಯಮಯವಾಗಿವೆ. ಪ್ರಧಾನವಾಗಿ ಕ್ರಿಯಾಪದಗಳು ಈ ಕೆಳಗಿನಂತೆ ನೋಡಬಹುದು.

೧. ಸಂಶ್ಲಿಷ್ಟ ಕ್ರಿಯಾಪದ

೨. ಸಂಯುಕ್ತ ಕ್ರಿಯಾಪದ

**೧. ಸಂಶ್ಲಿಷ್ಟ ಕ್ರಿಯಾಪದಗಳು:**

ಕ್ರಿಯಾಪದಗಳ ಧಾತುಗಳು ಕೆಲವು ನಿಷ್ಪಾದಕ ಪ್ರತ್ಯಯಯೊಂದಿಗೆ ಏರ್ಪಡುವ ಕ್ರಿಯಾಪದಗಳಿಗೆ ಸಂಶ್ಲಿಷ್ಟ ಕ್ರಿಯಾಪದಗಳು ಎನ್ನುತ್ತಾರೆ.

೧.೧. ಧಾತುವು + ಅ

ಸಕರ್ಮಕ ಧಾತುವಿನ ಮೇಲೆ 'ಆ' ಪ್ರೇರಣಾ ಕ್ರಿಯಾಪದ ಏರ್ಪಡುತ್ತವೆ.

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಅಡ್ | ತಡೆ | ಅಡಾ | ತಡೆಹಿಡಿ |
| ಕರ್ | ಮಾಡು | ಕರಾ | ಮಾಡೋಣ |
| ಕೂಟ್ | ಕುಟ್ಟು | ಕುಟಾ | ಕುಟ್ಟೋಣ |
| ಫಾಲ್ | ಹಾಕು | ಫುಲಾ | ಹಾಕಿಸು |

೧.೨ ದ್ವಿತ್ವಾಕ್ಷರ ಧಾತುವಿನಲ್ಲಿ ಪ್ರೇರಣಾರ್ಥಕವಾದ 'ಆ' ಮುಂದೆ ದ್ವಿತ್ವಾಕ್ಷರದಲ್ಲಿ 'ಅ' ಕಾರ ಬರುತ್ತದೆ.

ಉದಾಹರಣೆ:

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಖರಚ್ | ಖರ್ಚು | ಖರ್ಚಾ | ಖರ್ಚುಮಾಡು |
| ಪಕಡ್ | ಹಿಡಿ | ಪಕಡಾ | ಹಿಡಿಸು |
| ಸಾಮಳ್ | ಕೇಳು | ಸಮಳಾ | ಮನನಮಾಡು |

ದ್ವಿತ್ವಾಕ್ಷಲ್ಲಿ 'ಆ' ಇದ್ದರೂ ಈ ಮಾರ್ಪಾಡಾಗುತ್ತದೆ.

| | | | |
|---|---|---|---|
| ಹಕಾಲ್ | ಹೊಡೆ, ಹುಡಿ | ಹಕಲಾ | ಹೊರಗಡೆ ಹಾಕು |

ಧಾತುವಿನಲ್ಲಿ ಪ್ರಾಸ್ ಬಂದು ದೀರ್ಘವಾಗುವಾಗ ಅಕರ್ಮಕ ಧಾತುವು ಸಕರ್ಮಕ ಧಾತುವಾಗಿ ಮಾರ್ಪಾಡುತ್ತವೆ.

| | | | |
|---|---|---|---|
| (ಅ.ಕ) ಗಡ್ | ಹೂಳು | (ಸ.ಕ) ಗಾಡ್ | ಹೂಳಿಸು |
| ಥಮ್ | ಹುಬರ್ | ಥಾಮ್ | ಹುಬಾರ್ |

ಎರಡು ಅಕ್ಷರಗಳು ದೀರ್ಘವಾಗುವಾಗ ಅಕರ್ಮಕ ಧಾತುವು ಸಕರ್ಮಕವಾಗುತ್ತದೆ.

ಉದಾಹರಣೆ:

| | | | |
|---|---|---|---|
| ತೂಟ್ | ಮುರಿ | ತೋಡ್ | ಕೀಳು |
| ಫಾಡ | ಹರಿ | ಫೋಡ್ | ವಡಿ |

೧.೩ ಏಕಾಕ್ಷರ ಧಾತುವಿನ 'ರಾ' ಎನ್ನುವ ಪ್ರತ್ಯಯ ಸೇರಿಸಿದರೆ ಧಾತು 'ಅ' ಕಾರವಾಗಿ ಬದಲಾವಣೆ ಹೊಂದುತ್ತದೆ.

| | | | |
|---|---|---|---|
| ಖೋ/ಖಾ | ತಿನ್ನು | ಖರಾ | ತಿನಿಸು |
| ದ್ | ಕೊಡು | ದರಾ | ಕೊಡಿಸು/ಕೊರಸೊ |
| ಪೀ | ಕುಡಿ | ಪರಾ | ಕುಡಿಸು |

೧.೪ ಕೆಲವು ಧಾತುಗಳು 'ಏ' ದೀರ್ಘಾಕ್ಷರವಾಗುವುದುಂಟು

| | | | |
|---|---|---|---|
| ಕ್ | ಹೇಳು | ಕೇರಾ | ಹೇಳಿಸು |

೧.೫ ಕೆಲವು ದಾತುವಿನೊಂದಿಗೆ 'ಆಡ್' 'ಆಸ್' ಪ್ರತ್ಯಯವು ಸೇರಿದರೆ ಸಕರ್ಮಕ ಧಾತುವಾಗಿ ಮಾರ್ಪಡುತ್ತವೆ.

| | | | |
|---|---|---|---|
| ಖೂಟ್ | ಖಾಲಿ | ಖೂಟಾಡ್ | ಮುಗಿಸು, ಖಾಲಿಮಾಡು |
| ಹಂಸ್ | ನಗು | ಹಂಸಾಡ್ | ನಗಿಸು |
| ಧಾಂಸ್ | ಓಡು | ಧಾಂಸಗೋ | ಓಡಿಹೋದ |
| ಜಾಗ್ | ಎಚ್ಚರವಾಗು, | ಜಗಾಡ್ | ಎಚ್ಚರಿಸು |

ಕೆಲವು ಧಾತುಗಳಲ್ಲಿ ಮೇಲಿನ ಪದ್ಧತಿ ವಿಲಕ್ಷಣವಾದಾಗ ಕೆಳಗಿನ ರೂಪಗಳು ಏರ್ಪಡುತ್ತವೆ.

| | | | |
|---|---|---|---|
| ಭಳ್ | ಸೇರು | ಭೇಳ್ | ಕಲಸು, ಸೇರಿಸು |
| ಬೇಸ್ | ಕುಡು | ಬೇಸಾರ್ | ಕುರಿಸು |
| ದೇಕ್ | ನೋಡು | ದಕಾಳ್ | ತೋರಿಸು |
| ರೋ | ಅಳು | ರೋವಾಡ್ | ಅಳಿಸು |

ಕೆಲವು ಧಾತುಗಳು ಸಕರ್ಮಕ ಪ್ರೇರಣಾರ್ಥಕ ರೂಪಗಳೇ ಆಗಿರುತ್ತವೆ.

| | |
|---|---|
| ಆ | ಬಾ |
| ಜೋ | ಹೋಗು |
| ವಿಚಾರ್ | ಆಲೋಚಿಸು |

**೨. ಸಂಯುಕ್ತ ಕ್ರಿಯಾಪದಗಳು**

ಎರಡು ಧಾತುವಿನ ರೂಪಗಳು ಸೇರಿ ಏರ್ಪಡುವ ಕ್ರಿಯೆಗೆ ಸಂಯುಕ್ತ ಕ್ರಿಯಾಪದ ಎಂದು ಕರೆಯುತ್ತರೆ. ಇದರಲ್ಲಿ ಅನೇಕ ವಿಧಗಳಿವೆ. ಅವು ಕೆಳಗಿನಂತಿವೆ.

೨.೧ ಅಕರ್ಮಕ ಧಾತುಗಳನಂತರ ಜಾ, ಏಡ್, ತೆ, ಮೊದಲಾದ ಸಹಾಯಕ ಕ್ರಿಯಾಪದಗಳು ಸೇರಿ ಆಗುವಂತದು.

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಹಟ್ | ಸರಿ | ಹಟ್‌ಜೋ | ಆಚೆಸರಿ |
| ಆ | ಬಾ | ಆಜೋ | ಬಾರೋ |
| ಊಟ್ | ಏಳು | ಉಟ್ಟಡ್ | ಎದ್ದೇಳು |
| ಲಡ್ | ಜಗಳವಾಡು | ಲಡ್‌ರೆ | ಜಗಳವಾಡುತ್ತಿದ್ದಾರೆ |
| ಜೋ | ಹೋಗು | ಜಾಪಡೇ/ರ್ | ಹೋಗಾಚೆ |

**೨.೨ ಆ, ರೇ, ರೇಜಾ, ಎಂಬ ಸಹಾಯಕ ಕ್ರಿಯಾಪದಗಳು ಕೂಡ ಸಂಯುಕ್ತ ಕ್ರಿಯಾಪದಗಳಾಗಿ ಏರ್ಪಾಡಾಗುತ್ತದೆ.**

| | | | |
|---|---|---|---|
| ನಿಕ್‌ಳ್ | ಭಯಪಡು | ನಿಕ್‌ಳಾ | ಭಯಪಟ್ಟು ಹೋಗು |
| ಬೇಸ್ | ಕುತ್ಕೋಳ್ಳಿ | ಬೆಸರೇ | ಕುತುಕೊಳ್ಳುತ್ತಿದ್ದಾರೆ |
| ಹೂಬ್ | ನಿಲ್ಲು | ಹೂಬ್‌ರೇಜಾ | ನಿಂತಿರು |

ಸಕರ್ಮಕ ಧಾತುಗಳ ಜೊತೆಗೆ ಲೇ, ದೇ, ನಾಕ್, ಮೇಲ್, ಜೋ, ಎಂಬ ಸಹಾಯಕ ಕ್ರಿಯಾಪದಗಳು ಸೇರಿ ಏರ್ಪಾಡಾಗುವ ಸಂಯುಕ್ತ ಧಾತುಗಳು ಸಹ ಇದ್ದಾವೆ.

ಉದಾಹರಣೆಗೆ :

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ದೇಕ್ | ನೋಡು | ದೇಕ್‌ಲೇ | ನೋಡಿಕೊಂಡು |
| ಭಾಂದ್ | ಕಟ್ಟು | ಬಾಂದ್‌ಲೇ | ಕಟ್ಟಿಸಿಕೊಂಡು |
| ಕರ್ | ಮಾಡು | ಕರ್‌ದೇ | ಮಾಡಿಕೊಂಡು |
| ಕ್ | ಹೇಳು | ಕೆದ್ | ಹೇಳಲಿ ಬಿಡು |
| ತೋಡ್ | ಮುರಿ | ತೋಡನ್ನಾಕ್ | ಮುರಿದುಬಿಡು |
| ಕರ್‌ನಾಕ್ | ಮಾಡಿಬಿಡು | ಕರ್‌ಮೇಲ್ | ಮಾಡಿಡು |
| ಭಾದ್‌ವೆಲ್ | ಕಟ್ಟಿಡು | ಭಾಂದ್‌ಜೋ | ಕಟ್ಟಿ ಹೋಗು |
| ಮಾನ್ | ಒಪ್ಪಿಗೆ | ಮಾನ್‌ಜೋ | ಒಪ್ಪಿಕೊಳ್ಳು |

ನಾಮವಾಚಕದನಂತರ ಕ್ರಿಯಾಪದಗಳು ಸೇರಿ ಕೂಡಾ ಸಂಯುಕ್ತ ರೂಪಗಳಾಗುತ್ತವೆ.

| | | | |
|---|---|---|---|
| ನೀಂದ್ | ನಿದ್ರೆ | ನಿಂದಾ | ನಿದ್ರೆ ಬಂತು |
| ಗಿದ್ | ಹಾಡು | ಗಿದ್‌ಬೊಲ್ | ಹಾಡಾಡು |

೩. ಕ್ರಿಯಾಪದ ರೂಪ ನಿಷ್ಪತ್ತಿ:

ಲಂಬಾಣಿ ಭಾಷೆಯಲ್ಲಿ ಕ್ರಿಯಾನಿರ್ಮಾಣ ರೂಪದಲ್ಲಿರುತ್ತದೆ. ೧. ಧಾತು + ಕಾಲ/ಭಾವ ಬೋಧಕಪ್ರತ್ಯಯ + ಪ್ರತ್ಯಯಬೋಧಕ ಪ್ರತ್ಯಯ ಗಳಿಂದ ಕುಡಿದೆ.

ಸಕರ್ಮಕ ಕ್ರಿಯಾರೂಪ ಅಕರ್ಮಕ ಕ್ರಿಯಾರೂಪ ಎಂಬ ಈ ಎರಡು ವಿಧಗಳು. ಅಕರ್ಮಕ ಕ್ರಿಯಾ ರೂಪಗಳ ವಿವರ ಪುರುಷ ಬೋಧಕ ಕ್ರಿಯಾಪದ ತರಹ ಇರುತ್ತದೆ.

**೩.೧ ಸಮಾಪಕ ಕ್ರಿಯಾಪದ:**

**ಈ ವರ್ಗದಲ್ಲಿ ಕ್ರಿಯಾಪದಗಳು ಕೆಳಗಿನಂತಿವೆ.**

**A.** ಭವಿಷ್ಯಾದ್ವಾರ್ಥಕ ಕ್ರಿಯಾಪದ (-o-/ತ್-/)

**ಕಾಟ್ ಕಡಿ**

| | ಏಕವಚನ | | | ಬಹುವಚನ | | |
|---|---|---|---|---|---|---|
| ಉತ್ತಮ ಪುರುಷ : | ಕಾಟ್+o+ಊ | = | ಕಡಿಯುತ್ತೇನೆ. | ಕಾಟ್+o+ಆಂ | = | ಕಡಿಯುತ್ತೇವೆ |
| ಮದ್ಯಮ ಪುರುಷ : | ಕಾಟ್+o+ಏ | = | ಕಡಿಯುತ್ತಾನೆ. | ಕಾಟ್+o+ಏ | = | ಕಡಿಯುತ್ತಾರೆ. |
| ಪ್ರಥಮ ಪುರುಷ : | ಕಾಟ್+o+ಏ | = | ಕಡಿಯುತ್ತಾರೆ. | ಕಾಟ್+o+ಏ | = | ಕಡಿಯುತ್ತಾರೆ. |

**ಖೋ ತಿನ್ನು**

| | ಏಕವಚನ | | | ಬಹುವಚನ | | |
|---|---|---|---|---|---|---|
| ಉತ್ತಮ ಪುರುಷ : | ಖಾ+o+ಊ | = | ತಿನ್ನುತ್ತೇನೆ | ಖಾ+o+ಮ | = | ತಿನ್ನುತ್ತೇವೆ. |
| ಮದ್ಯಮ ಪುರುಷ : | ಖಾ+o+ವೇ | = | ತಿನ್ನುತ್ತಿದ್ದಾನೆ. | ಖಾ+o+ಏ | = | ತಿನ್ನುತ್ತಿದ್ದಾರೆ. |
| ಪ್ರಥಮ ಪುರುಷ : | ಖಾ+o+ಏ/ವೇ | = | ತಿನ್ನುತ್ತಾನೆ. | ಖಾ+o+ಏ/ವೇ | = | ತಿನ್ನುತ್ತಿದ್ದಾರೆ. |

**ದ ಕೊಡು**

| | ಏಕವಚನ | | | ಬಹುವಚನ | | |
|---|---|---|---|---|---|---|
| ಉತ್ತಮ ಪುರುಷ : | ಧ್+o+ಊ | = | ಕೊಡುತ್ತೇನೆ | ದ್+o+ಆಂ | = | ಕೊಡುತ್ತೇವೆ |
| ಮಧ್ಯಮ ಪುರುಷ : | ದ್+o+ಪ | = | ಕೊಡುತ್ತೇವೆ | ದ್+o+ಏ | = | ಕೊಡುತ್ತಾರೆ |
| ಪ್ರಥಮ ಪುರುಷ : | ದ್+o+ಏ | = | ಕೊಡುತ್ತಾನೆ | ದ್+o+ಏ | = | ಕೊಡುತ್ತಾರೆ |

**ಛ ಇದೆ**

| | ಏಕವಚನ | | | ಬಹುವಚನ | | |
|---|---|---|---|---|---|---|
| ಉತ್ತಮ ಪುರುಷ : | ಛ+o+ಊ | = | ಇರುತ್ತೇನೆ | ಛ್+o+ಆಂ | = | ಇರುತ್ತೇವೆ |
| ಮದ್ಯಮ ಪುರುಷ : | ಛ+o+ಈ | = | ಇದ್ದೇನೆ | ಛ್+o+ಓ/ಊ | = | ಇದ್ದಾರೆ |
| ಪ್ರಥಮ ಪುರುಷ : | ಛ+o+ಏ | = | ಇರುತ್ತಾನೆ | ಛ್+o+ಏ | = | ಇರುತ್ತಾರೆ |

'ತ' ಕಾರ ಪ್ರತ್ಯಯದ ಜೊತೆ ಸೇರಿ ಕೆಲವು ಕ್ರಿಯಾಪದ ರೂಪಗಳು ಬರುತ್ತವೆ. ತ ಕಾರ ಇರುವ ಕ್ರಿಯಾಪದಗಳಲ್ಲಿ ಭೂತಾರ್ಥ ಬರುವುದನ್ನು ಕಾಣಬಹುದು.

ಉದಾಹರಣೆಗೆ:

ಕರ್ ಮಾಡು

| | | | | |
|---|---|---|---|---|
| ಪುಲ್ಲಿಂಗ | : | ಕರ್+ ತು + ಓ | = | ಮಾಡುತ್ತಿದ್ದೆ |
| ಸ್ತ್ರೀಲ್ಲಿಂಗ | : | ಕರ್+ ತ್ + ಈ | = | ಮಾಡ್ತಿದೆ |
| | | ಕರ್+ ತೆ + ಏ | = | ಮಾಡುತ್ತಿದ್ದೆವು |
| | | ಕರ್+ ತ್ + ಈ | = | ಮಾಡುವೆ |

ಈ ಕ್ರಿಯಾಪದದ ರೂಪವನ್ನು ವಾಕ್ಯರೂಪದಲ್ಲಿ ಈ ರೀತಿ ನೋಡಬಹುದು.

| | | |
|---|---|---|
| ಮ ಅವಚೂ | = | ನಾನು ಬರುತ್ತೇನೆ |
| ಮ ಆತೋತೋ | = | ನಾನು ಬರುತ್ತಿದ್ದೆ |

B. **ಶತ್ರರ್ಥಕ ಕ್ರಿಯಾಪದ :**

ಈ ಕ್ರಿಯಾಪದ ಧಾತು ರೂಪದಲ್ಲಿದ್ದು, ವರ್ತಮಾನ, ಭೂತ, ಭವಿಷ್ಯತ್, ಕಾಲದಲ್ಲಿ ಮಾರ್ಪಾಡಾಗುತ್ತದೆ.

**ದೇಕ್ ನೋಡು**

ಏಕವಚನ:

| | | |
|---|---|---|
| ಪುಲಿಂಗ : ದೇಕ್ + ರ್/ತ್/ ಓ | ದೇಕ್ ರತೋ | ನೋಡುತ್ತಿದೆ |
| ಸ್ತ್ರೀಲಿಂಗ : ದೇಕ್ + ರ್/ತ್ + ಈ | ದೇಕ್ ರೀತೀ | ನೋಡುತ್ತಿದೆ |

| | | | |
|---|---|---|---|
| ವಕ್ತ ಪುಲಿಂಗದಲ್ಲಿ | : | ಮ ದೇಕ್‌ರೋಂಚು | ನಾನು ನೋಡುತ್ತಿದ್ದೇನೆ |
| ವಕ್ತ ಸ್ತ್ರೀಲಿಂಗದಲ್ಲಿ | : | ಮ ದೇಕ್‌ರೀತಿ | ನಾನು ನೋಡುತ್ತಿದ್ದೇನೆ |
| ವಕ್ತ ಪುಲಿಂಗದಲ್ಲಿ | : | ಮ ದೇಕ್‌ತೊತೋ | ನಾನು ನೋಡುತ್ತಿದ್ದೇನೆ |

C. **ಭೂತಕಾಲಿಕ ಕ್ರಿಯಾಪದ :**

ಇಲ್ಲಿ ಧಾತು ರೂಪಿನ ಕ್ರಿಯಾಪದ 'ಓ' ಅಥವಾ 'ಈ,' ಕಾರ ಪ್ರತ್ಯಯ ಹತ್ತುತ್ತದೆ.

**ಉದಾಹರಣೆಗೆ:**

**ಭರ್ ತುಂಬು**

| | ಏಕವಚನ | | ಬಹುವಚನ | |
|---|---|---|---|---|
| ಪುಲಿಂಗ : ಭರ್+o+ ಓ + ಏ | ಭರೋ | ತುಂಬಿದೆ | ಭರೇ | ತುಂಬಿದೆವು |
| ಸ್ತ್ರೀಲಿಂಗ: ಭರ್+o+ಈ | ಭರೀ | ತುಂಬಿದೆ | ಭರೀ | ತುಂಬಿದೆ |

**ಲಾ ತಾ**

| | ಏಕವಚನ | | ಬಹುವಚನ | |
|---|---|---|---|---|
| ಪುಲಿಂಗ : ಲಾ+ಯ್+ಓ + ಏ | ಲಾಯೋ | ತಂದಿದ್ದೇನೆ | ಲಾಯೇ | ತಂದಿದ್ದೇನೆ |
| ಸ್ತ್ರೀಲಿಂಗ: ಲಾ+ಯ್+ಈ | ಲಾಯೀ | ತಂದೀನಿ | ಲಾಯೀ | ತಂದ್ದೇವೆ |

**ಈ ಕ್ರಿಯೆ ವಾಕ್ಯ ರೂಪದಲ್ಲಿ ನೋಡುವುದಾದರೆ :**

ವಕ್ತ ಪುಲ್ಲಿಂಗವಾದಾಗ :

| | |
|---|---|
| ಮ ಕೀದೋ | ನಾನು ಮಾಡಿದೆ. |
| ಹಮ್ ಕೀದೋ | ನಾವು ಮಾಡಿದ್ದೇವೆ. |

ವಕ್ತ ಸ್ತ್ರೀಲಿಂಗವಾದಾಗ :

| | |
|---|---|
| ಮ ಕೀದಿ | ನಾನು ಮಾಡಿದಿನಿ |
| ಹಮ್ ಕೀದಿ | ನಾವು ಮಾಡಿದ್ದೇವೆ |

ಪ್ರಥಮ ಪುರುಷದಲ್ಲಿ :

| | | |
|---|---|---|
| ಊ ಕೋ | ಅವನು ಹೇಳಿದ್ದಾನೆ | ಏಕವಚನ ಪುರುಷ |
| ಊ ಕೀ | ಅವಳು ಹೇಳಿದ್ದಾಳೆ | ಏಕವಚನ ಸ್ತ್ರೀಲಿಂಗ |
| ಓ ಕೇ | ಅವರು ಹೇಳಿದ್ದಾರೆ | ಬಹುವಚನ ಪುರುಷ |
| ಓ ಕೀ | ಅವರು ಹೇಳಿದ್ದಾರೆ | ಬಹುವಚನ ಸ್ತ್ರೀಲಿಂಗ |

ಭೂತಕಾಲಿನ ಕ್ರಿಯಾಪದಗಳೆಲ್ಲ ಧಾತುವಿನ ರೂಪಾಂತರವಾಗಿ ಕೆಲವೊಮ್ಮೆ ರೂಪಾಂತರವಾಗದೆಯೂ ಇರುವುದು ಕಂಡು ಬರುತ್ತದೆ.

**ಉದಾಹರಣೆಗೆ:**

| **ಲಂಬಾಣಿ** | **ಕನ್ನಡ** | **ಲಂಬಾಣಿ** | **ಕನ್ನಡ** |
|---|---|---|---|
| ಬೇಸ್ | ಕೂಡು | ತೂ ಬೇಸ್ | ನೀನು ಕೂಡು |
| ದೇಕ್ | ನೋಡು | ತೂ ದೇಕ್ | ನೀನು ನೋಡು |
| ಊದೀಟೋ | - | ಅವನು ನೋಡಿದ್ದಾನೆ | - |
| ಜೋಗೇ | ಹೋಗು | ತೂಜೋ | ನೀನು ಹೋಗು |
| ಮಗೋ | - | ನಾನು ಹೋದೆ /ಹೋಗುತ್ತೇನೆ | - |
| ಲೆ, ದ | ತಗೊ | ತೂ ಲ್ | ನೀನು ತಗೋ |
| ಮ ಲಿದೋ | - | ನಾನು ತೆಗೆದುಕೊಂಡೆ/ತಕ್ಕೊಂಡೆ. | - |

**ಭಾವವಾಚಕ ಕ್ರಿಯಾಪದ :**

೧. ವಿಧಿ ಕ್ರಿಯೆಗಳು **:** ಈ ಕ್ರಿಯಾಪದಗಳಲ್ಲಿ ಮಧ್ಯಮ ಪುರುಷ ಏಕವಚನ, ಬಹುವಚನದಿಂದ ಕೂಡಿರುತ್ತದೆ.

**ಉದಾಹರಣೆಗೆ:**

| ಏಕವಚನ | ಬಹುವಚನ |
|---|---|
| ಊಟ್ | ಏಳು |
| ಊಟೋ | ಎದ್ದೇಳಿ |

ಮಧ್ಯಮ ಪುರುಷ :

| | |
|---|---|
| ಆ | ಬಾ |
| ಆವೋ | ಬರ್ರೀ |

| | |
|---|---|
| ದೇ | ಕೊಡು |
| ದೇವೋ | ಕೊಡ್ರಿ |

ಕೆಲವು ಧಾತು ವಿರುವ ರೂಪಗಳು ಏಕವಚನವಾಗಿವೆ. 'ಓ' ಕಾರ ಸೇರಿದರೆ ಬಹುವಚನವಾಗುತ್ತದೆ.

ಉದಾ:

| | |
|---|---|
| ತೂಂಖೋ | ಉಗುಳಿದ /ನೀನು ತಿನ್ನು |
| ತೂಂಜೋ | ನೀನು ಹೋಗು |

ಪುರುಷ ಸಂಬಂಧ ವಿಲ್ಲದೆ ಇರುವ ಕೆಲವು ವಿಧಿ ಕ್ರಿಯೆಗಳು ಕೂಡ ಇವೆ.

**'ಣೂ' ಅನ್ನುವ ಪ್ರತ್ಯಯಗಳು ಸೇರಿದಾಗ,**

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಕರ್ | ಮಾಡು | ಮ್ ಕರಣೂ | ನಾನು ಮಾಡಬೇಕು |
| ತೂ | ನೀನು | ತೂ ಕರಣೂ | ನೀನು ಮಾಡಬೇಕು |
| ಊ | ಅವನು | ಊ ಕರಣೂ | ಅವನು ಮಾಡಬೇಕು |
| ಓ | ಅವರು | ಓ ಕರಣೂ | ಅವರು ಮಾಡಬೇಕು |

ಹಾಗೆ ಒಂದು ಕೆಲಸ ಮಾಡುವ ಆಸೆ ಅಥವಾ ಏಕಕಾಲದಲ್ಲಿ ಜರುಗುವ ಸಂಕಲ್ಪ, ಇವು ಅಶಿಸ್ಸುಗಿಂತ ಮೊದಲೇ ಬರುವಂತಹ ವರ್ಗ

**ಕರ್ ಮಾಡು**

| | | ಏಕವಚನ | | ಬಹುವಚನ | |
|---|---|---|---|---|---|
| ಉತ್ತಮ ಪುರುಷ | : | ಕರಿಯುಂ | ಮಾಡುತ್ತೇನೆ | ಕರಿಯಾ | ಮಾಡುತ್ತೇವೆ |
| ಮದ್ಯಮ ಪುರುಷ | : | ಕರಿಯೆ | ಮಾಡುತ್ತೇವೆ | ಕರಿಯೊ | ಮಾಡುತ್ತಾರೆ |
| ಪ್ರಥಮ ಪುರುಷ | : | ಕರಿಯೇ | ಮಾಡುತ್ತಾನೆ | ಕರಿಯೇ | ಮಾಡಿದ್ದಾರೆ |

**ಆ ಬಾ**

| | | ಏಕವಚನ | | ಬಹುವಚನ | |
|---|---|---|---|---|---|
| ಉತ್ತಮ ಪುರುಷ | : | ಆಯು | ಬರುತ್ತೇನೆ | ಆಂಯೇ | ಬರುತ್ತಾರೆ |
| ಮದ್ಯಮ ಪುರುಷ | : | ಆಯೇ | ಬರುತ್ತೇವೆ | ಆಯಿಯೊ | ಬರುತ್ತೇನೆ |
| ಪ್ರಥಮ ಪುರುಷ | : | ಆಯೇ | ಬರುತ್ತಾರೆ | ಆಯಿಯೇ | ಬರುತ್ತಾರೆ |

**ದೇ ಕೊಡು**

| | | ಏಕವಚನ | | ಬಹುವಚನ | |
|---|---|---|---|---|---|
| ಉತ್ತಮ ಪುರುಷ | : | ದೀಂಯುಂ | ಕೊಡುತ್ತೇವೆ | ದೀಂಯಾ | ಕೊಡುತ್ತೇವೆ |
| ಮದ್ಯಮ ಪುರುಷ | : | ದೀಯೇ | ಕೊಡುತ್ತಾನೆ | ದೀಯಾ | ಕೊಡುತ್ತಾರೆ |
| ಪ್ರಥಮ ಪುರುಷ | : | ದೀಯೇ | ಕೊಡುತ್ತಾನೆ | ದೀಯೇ | ಕೊಡುತ್ತಾರೆ |

| | |
|---|---|
| ೧. ಮ ತೋನ್ 'ವರಾ' ದಿಂಯು | ನಾನು ನಿನಗೆ ವರವನ್ನು ಕೊಡುತ್ತೇನೆ. |
| ೨. ದೇವ್ ತೋನ್ ಅಚೋ ಕರಿಯೆ/ಕರೆಸ | ದೇವರು ನಿನಗೆ ಒಳ್ಳೆಯದನ್ನು ಮಾಡುತ್ತದೆ. |

ಈ ಮೇಲಿನ ವಾಕ್ಯಗಳಲ್ಲಿ (೧) ರಲ್ಲಿ 'ದಿಂಯು' (ಕೊಡುತ್ತೇನೆ) ಅಂತ ಇದೆ, ಅದು ಆಕಾಂಕ್ಷೆಯ ಮೇರೆಗೆ ಕರಿಯ/ಕರಿಸ್ ಇದೆ. ಅದು ಅಶಿಸ್ತನ್ನು ಸೂಚಿಸುತ್ತದೆ.

ವಾಕ್ಯದ ಜತೆಗೆ ಸಹಾಯಕ ಕ್ರಿಯಾಪದಗಳೂ ಕೂಡ ಬರುತ್ತವೆ.

**ಉದಾಹರಣೆಗೆ:**

**ತೂ ಮರೇಸ್** **ನೀನು ಸಾಯುತ್ತಿಯಾ**

'ಮರೇಸ್' ನಂತರ 'ಜಾ' ಎನ್ನುವ ಸಹಾಯಕ ಕ್ರಿಯಾಪದ ಬಂದರೆ,

| | |
|---|---|
| ತೂ ಮರೇಸ್ ಜಾ! | ಸಾಯುತ್ತಿಯಾ ಹೋಗು |
| ತಾರ್ ಘರ್ ಬಳಜಾ! | ನಿನ್ನ ಮನೆ ಸುಟ್ಟು ಹೋಗಲಿ |
| ತಾರ್ ಧಣಿ ಮರಜಾ! | ನಿನ್ನ ಗಂಡ ಸಾಯಲಿ |

**೪. ಅಸಮಾಪಕ ಕ್ರಿಯಾಪದ :**

ಕ್ರಿಯಾ ವ್ಯಾಪಾರ ಪೂರ್ತಿಯಾಗದಿದ್ದರೆ ಅದನ್ನು ಅಸಮರ್ಪಕ ಕ್ರಿಯಾಪದ ಎನ್ನುತ್ತಾರೆ. ಇದು ವರ್ತಮಾನ ಮತ್ತು ಭೂತಕಾಲ ಎರಡರಲ್ಲಿ ಇರುತ್ತದೆ.

**೪.೧. ಶತ್ರರ್ಥಕ ಅಸಮಾಪಕ ಕ್ರಿಯಾಪದ :**

'ತೂ' ಎನ್ನುವ ಪ್ರತ್ಯಯ ಸೇರಿ ಶತ್ರರ್ಥಕ ಅಕರ್ಮಕ ಕ್ರಿಯಾಪದ ಆಗುತ್ತದೆ. ಪ್ರಧಾನ ವಾಕ್ಯದಲ್ಲೂ ಕೂಡ ಈ ಕ್ರಿಯೆ ಜರುಗುತ್ತವೆ.

**ಉದಾಹರಣೆಗೆ:**

**ಕರ್** **ಮಾಡು**

ಏಕವಚನ

| | | | |
|---|---|---|---|
| ಪುಲ್ಲಿಂಗ | : | ಕರತೂ/ತೋ | ಮಾಡುತ್ತೇನೆ |
| ಸ್ತ್ರೀಲ್ಲಿಂಗ | : | ಕರ್ ತೊ/ತೀ | ಮಾಡುತ್ತಿದ್ದೆ |

ಬಹುವಚನ

| | | | |
|---|---|---|---|
| ಪುಲ್ಲಿಂಗ | : | ಕರತೇ | ಮಾಡುತ್ತಿದ್ದೆ |
| ಸ್ತ್ರೀಲ್ಲಿಂಗ | : | ಕರ್‌ತೀ | ಮಾಡುತ್ತಿದ್ದೆ |
| ಲಂಬಾಣಿ ವಾಕ್ಯ | : | ಪುಲ್ಲಿಂಗ | ಮಕರ್‌ನ್ ಜಾತೋತೋ |
| ಕನ್ನಡ ವಾಕ್ಯ | : | | ನಾನು ಮಾಡಿ ಹೋಗುತ್ತಿದ್ದೆ |
| ಲಂಬಾಣಿ ವಾಕ್ಯ | : | ಸ್ತ್ರೀಲಿಂಗ | ಮಕರತಿ ಜಾತೀತೀ |
| ಕನ್ನಡ ವಾಕ್ಯ | : | | ನಾನು ಮಾಡಿ ಹೋಗುತ್ತಿದ್ದೆ |

**೪.೨. ಭೂತಕಾಲಿಕ ಅಸಮಾಪಕ ಕ್ರಿಯಾಪದ :**

| | |
|---|---|
| ಕರ್ | ಮಾಡು |
| ಕರ್-ಅನ್/ಕರ್‌ವಾಣಿ | ಮಾಡಿ |
| ಜೋ | ಹೋಗು |
| ಜಾನ್/ಜಾತಾಣಿ | ಹೋಗಿ |

ಆ (ಬಾ) ಎನ್ನುವ ಸಹಾಯಕ ಕ್ರಿಯಾಪದದ ಮುಂದೆ 'ಇ' ಎನ್ನುವ ಕಾರ್ಯಾರ್ಥಕ ಪ್ರತ್ಯಯ ಬಂದರೆ

ಉದಾಹರಣೆಗೆ

**ದೇಕ್ ನೋಡು**

ದೇಕ್+ಇ+ಆಯಾ = ನೋಡಿ ಬಾ

'ಊ ಮನ್ ದೇಕನ್ ಆಜೋ ಕನ್ ಕೋ'

ಅವನು ನನಗೆ ನೋಡಿ ಹತ್ತಿರ ಬಾ ಎಂದನು

'ಊ ಸೇನ್ ಆಪಿದೇನ್ ಆರೋಚ್'

ಅವನು ಎಲ್ಲರೂ ಬಂದನಂತರ ಬರುತ್ತಾನೆ.

**'ಪಿ' ಎನ್ನುವ ಧಾತುವಿನ ನಂತರ ಬರುವ 'ಅನ್' ನಲ್ಲಿ 'ಅ' ಕಾರ ಲೋಪವಾಗುತ್ತದೆ.**

ಪಿ+ಅನ್ ಪಿನ್ ಕೂಡಿದು

**೪.೩. ಭಾವಾರ್ಥಕ ಕ್ರಿಯಾಪದಗಳು:**

| | |
|---|---|
| ಕರ್ | ಮಾಡು |
| ಕರ್‌ಣು | ಮಾಡಬೇಕು |

ಲಂಬಾಣಿ ವಾಕ್ಯ: 'ಈ ವತ್ ಜಾಯೇನ್ ಖೂಷಿ ಪಡ್ರೋಚ್' !

ಕನ್ನಡ ವಾಕ್ಯ : 'ಇವನು ಅಲ್ಲಿಗೆ ಹೋಗಲು ಇಷ್ಟ ಪಡುತ್ತಿದ್ದಾನೆ.'

**೪.೪. ಚಾದರ್ಥಕ ಕ್ರಿಯಾಪದ : 'ತೋ' ಎನ್ನುವ ಪ್ರತ್ಯಯ ಸೇರಿ ಚಾದಾರ್ಥಕ ಕ್ರಿಯಾಪದ ಆಗುತ್ತದೆ.**

**ಉದಾಹರಣೆಗೆ**

**ಜೋ = ಹೋಗು**

ಲಂಬಾಣಿ ವಾಕ್ಯ: 'ತೂ ವತ್ ಜಾವತೋ ಮಾವುಂಚು'

ಕನ್ನಡ ವಾಕ್ಯ : ನೀನು ಅಲ್ಲಿಗೆ ಹೋಗುವುದಾದರೆ ನಾನು ಬರುತ್ತೇನೆ

ಲಂಬಾಣಿ ವಾಕ್ಯ: 'ತೂ ವತ್ ಆಯೊವತೋ ಆಚ್‌ರೇತೋ'

ಕನ್ನಡ ವಾಕ್ಯ : ನೀನು ಅಲ್ಲಿಗೆ ಬಂದಿದ್ದರೆ ಚೆನ್ನಾಗಿರುತ್ತಿತ್ತು.

**೪.೫. ಪುರುಷ ಬೋಧಕ ಪ್ರತ್ಯಯ :**

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ : | ಊ | ಆಂ ಕೂಂ, ಕು |
| ಮದ್ಯಮ ಪುರುಷ : | " | ಏ/ವೇ/ಂಓ |
| ಪ್ರಥಮ ಪುರುಷ : | ಏ/ವೇ/ಂ | ಏ/ವೇ/ಂ |

| | ಏಕವಚನ | ಬಹುವಚನ |
|---|---|---|
| ಪುಲ್ಲಿಂಗ : | ಓ | ಏ |
| ಸ್ತ್ರೀಲ್ಲಿಂಗ : | ಈ | ಈ |

ಪೂರ್ಣ ರೂಪಗಳು:

ನಿಶ್ಚಯಾರ್ಥಕ ರೂಪಗಳು

ಕಾಲವಾಚಕ ಪ್ರತ್ಯಯಗಳು

ಸರಳ ಭೂತ ಕಾಲವಾಚಕ ಪ್ರತ್ಯಯ:

ಏ-ಓ

ಏ : ಇದು ೧ ನೇ ವರ್ಗಕ್ಕೆ ಸೇರಿದ ಕ್ರಿಯಾಪದಗಳ ಹಿಂದೆ ಬರುತ್ತೆ.

ಉದಾಹರಣೆ:

| ಲಂಬಾಣಿ | ಕನ್ನಡ | ಲಂಬಾಣಿ | | ಕನ್ನಡ | |
|---|---|---|---|---|---|
| ಮರ್ | ಸಾಯು | ಮ | ಮರಗೊಯೇ | ನಾನು | ಸತ್ತೆ. |
| ಆಯೆ | ಬರು | ಹಮ್ | ಆಯೇ | ನಾವು | ಬಂದೆವು. |
| ಲಾ | ತರು | ವೂ | ಲಾಯೇ | ಅವನು | ತಂದ. |
| ಖೋದ್ | ಅಗೆ | ವೋ | ಖೋದೇ | ಅವರು | ಅಗೆದರು. |
| ರಕಾಡ್ | ಉಳಿಸು | ವೋ | ರಕಾಡೇ | ಅವು | ಉಳಿಸಿದವು. |

ಓ : ಇದು ೪ ನೇ ವರ್ಗಕ್ಕೆ ಸೇರಿದ ಕ್ರಿಯಾಪದಗಳ ಹಿಂದೆ ಬರುತ್ತೆ.

ಉದಾಹರಣೆ:

| ಲಂಬಾಣಿ | ಕನ್ನಡ | ಲಂಬಾಣಿ | | ಕನ್ನಡ |
|---|---|---|---|---|
| ಖೋ | ಊಟಮಾಡು | 'ಮ' | ಖಾಲ್ದೋ | ನಾನು ಊಟಮಾಡಿದೆ |
| ಸಮಜ್ | ತಿಳಿದುಕೊಳ್ಳು | 'ವೂ' | ಸಮಜ್‌ಗೋ | ಅವನು ತಿಳಿದ |
| ಕ್ | ಹೇಳು | 'ವೂ' | ಕೇದಿನೋ | ಅವನು ಹೇಳಿದನು |

೨. ಇದು ನಿಷೇದ ಪ್ರತ್ಯಯ 'ಕ' ದ ಹಿಂದೆ ಕೂಡ ಬರುತ್ತದೆ.

ಉದಾಹರಣೆ:

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಲಾ | ತರು | ಲಾಯ್ಕೋನಿ(ಲಾಯೇ-%- ಕ-ನಿ) | ನಾನು ತರಲಿಲ್ಲ. |
| ಸಿಕ್ | ಕಲಿ | ಸಿಕ್ಕೋನಿ (ಸಿಕ್ಕೋ-%- ಕ-ನಿ) | ನೀನು ಕಲಿಯಲಿಲ್ಲ. |
| ಖೋ | ತಿನ್ನು | ಖಾದ್ಕೋನಿ (ಖಾದೋ-%- ಕ-ನಿ) | ಅವನು ತಿನ್ನಲಿಲ್ಲ. |
| ಮಾರ್ | ಕೊಲ್ಲು | ಮಾರ್ಕೋನಿ (ಮಾರೋ-%- ಕ-ನಿ) | ಅದು ಕೊಲ್ಲಲಿಲ್ಲ. |

ಪೂರ್ಣ ವರ್ತಮಾನ ವಾಚಕ ಪ್ರತ್ಯಯ:

ಓ :

ಇದು ೨ ಹಾಗೂ ೪ ನೇ ವರ್ಗಗಳಿಗೆ ಸೇರಿದ ಕ್ರಿಯಾಪದಗಳ ಹಿಂದೆ ಬರುತ್ತೆ.

ಉದಾಹರಣೆ:

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಮೇಲ್ | ಇಡು | 'ಮ' ಮೇಲೊತೋ | ನಾನು ಇಟ್ಟಿದೆ |
| ದೇಕ್ | ನೋಡು | 'ಹಮ್' ದೀಟೆತೇ | ನಾವು ನೋಡಿದ್ದೆವು |

| | | | |
|---|---|---|---|
| ಪೀ | ಕುಡಿ | 'ತೂ'ಪೀಮೇ ಲೋಚೀ | ನೀನು ಕುಡದಿದ್ದು |
| ಭಾಂಡ್ | ಬೈಯ್ಯು | 'ವೂ'ಬಾಂಡೀತಿ | ಅವಳು ಬೈದಳು |
| ದ್ | ಕೊಡು | 'ವೋ'ದಮೇಲಿಚ್ | ಅವರು ಕೊಟ್ಟಿದ್ದರು |
| ಖೋ | ಊಟಮಾಡು | 'ವೂ' ಖಾಲ್ದೋತೋ | ಅವನು ಊಟಮಾಡಿದ |

**ಅಭೂತಕಾಲವಾಚಕ ಪ್ರತ್ಯಯ:**

ಚು :

ಇದು ೧ (ಅ) ೨ ಹಾಗೂ ೪ ನೇ ವರ್ಗಗಳಿಗೆ ಸೇರಿದ ಕ್ರಿಯಾಪದಗಳ ಹಿಂದೆ ಬರುತ್ತದೆ.

**ಉದಾಹರಣೆ:**

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಲಾ | ತರು | ಮ ಲಾವುಂಚು | ನಾನು ತರುತ್ತೇನೆ. |
| ಮರ್ | ಸಾಯು | ಹಮ್ ಮರಾಚಾ | ನಾವು ಸಾಯುತ್ತೇವೆ. |
| ಆ | ಬರು | ತೂ ಆಯೇಚಿ | ನೀನು ಬರುತ್ತೀ. |
| ಮೇಲ್ | ಇಡು | ತಮ್ ಮೇಲೊಚೋ | ನೀವು ಇಡುತ್ತೀರಿ. |
| ದ್ | ಕೊಡು | ವೂ ದೇರಿಚ | ಅವಳು ಕೊಡುತ್ತಾಳೆ. |
| ಕ್ | ಹೇಳು | ವೋ ಕಚ್ | ಅವರು ಹೇಳುತ್ತಾಳೆ/ನೆ. |

% - ಶೂನ್ಯ

ಈ ಪ್ರತ್ಯಯವು ಅ) ೩ ನೇ ವರ್ಗಕ್ಕೆ ಸೇರಿದ ಕ್ರಿಯಾಪದ ('ಉ' ಸ್ವರಾಂತ್ಯದ ಕ್ರಿಯಾಪದಗಳನ್ನು ಬಿಟ್ಟು) ಗಳಿಗೆ ಸೇರುವ ನಿಷೇಧ ಪ್ರತ್ಯಯ 'ಆ' - ದ ಹಿಂದೆಯೂ (ಅ) ೧ 'ಏನ್' ಅಲ್ಲದೆ ೩ ನೇ 'ಉ' ಸ್ವರಾಂತ್ಯದ ಕ್ರಿಯಾಪದಗಳು ಮಾತ್ರ ವರ್ಗಗಳ ಕ್ರಿಯಾಪದಗಳಿಗೆ ಸೇರುವ ಪ್ರತ್ಯಯ ನ - ದ ಹಿಂದೆಯೂ ಬರುತ್ತೆ.

**ಉದಾಹರಣೆ:**

| | ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|---|
| ಅ) | ವಾತೇಕರ್ | ಮಾತಾಡು | ಮ ವಾತೇಕರೂನಿ(ವಾತೇಕರ್ %-ಉನ್-ಇ) | ನಾನು ಮಾತಾಡುವುದಿಲ್ಲ. |
| | ಧಾಸ್ | ಓಡು | ಹಮ್ ಧಾಸಾನಿ (ಧಾಸ್-% ಆ-ನ-ಇ) | ನಾವು ಓಡುವುದಿಲ್ಲ. |
| | ಪಕಡ್ | ಹಿಡಿ | ವೋ ಪಕಡೇನಿ (ಪಕ್‌ಡ್-% ಏ-ನ-ಇ) | ಅವರು,ಇವರು ಹಿಡಿಯುವುದಿಲ್ಲ. |
| | ವಾ | ಬಾಚು | ವೂ ವಾಯೇನಿ (ವಾಯ್-% ಏ-ನ-ಇ) | ಅವನು,ಇವನು ಬಾಚುವುದಿಲ್ಲ. |

**ಅಪೂರ್ಣ ರೂಪಗಳು:**

**ಭಾವರೂಪ ಪ್ರತ್ಯಯ:**

ಇದು 'ವ' 'ವೇನ್' 'ಆ' 'ಆಯೇನ್' 'ಜೋ' 'ಜಾಯೇನ್' ಹಾಗೂ ಸ್ವರಾಂತ್ಯದ ಹಿಂದೆ ಬರುತ್ತವೆ.

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ವ | ಆಗು | ವೇನ್ | ಆಗಲು |
| ಆ | ಬರು | ಆಯೇನ್ | ಬರಲು |
| ಜೋ | ಹೋಗು | ಜಾನ್ | ಹೋಗಲು |

| | | | |
|---|---|---|---|
| ಲಾ | ತರು | ಲಾಯೇನ್ | ತರಲು |
| ಮಾರ್ | ಹೊಡೆ | ಮಾರೇನ್ | ಹೊಡೆಯಲು |
| ದ್ | ಕೊಡು | ದೇನ್ | ಕೊಡಲು |
| ಖೋ | ತಿನ್ನು | ಖಾಯೇನ್ | ತಿನ್ನಲು |
| ಛೋಡ್ | ಬಿಡು | ಛೋಡೇನ್ | ಬಿಡಲು |

ಪಕ್ಷಾರ್ಥಕ ಕ್ರಿಯಾ ನ್ಯೂನ ಪ್ರತ್ಯಯ: ಈ, ಏ, ಓ, ಎಂಬ ಪ್ರತ್ಯಯ ಎಲ್ಲ ಭೂತ ಹಾಗೂ ಅಭೂತಕಾಲವಾಚಕ ಪ್ರಕೃತಿಗಳ ಹಿಂದೆ ಬರುತ್ತವೆ.

**ಉದಾಹರಣೆಗೆ:**

**ಭೂತಕಾಲ:**

**ಸರಳಭೂತಕಾಲ:**

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಖೋ | ತಿನ್ನು/ಊಟಮಾಡು | ಮ ಖಾದೋತೋ | ನಾನು ಊಟಮಾಡಿದರೆ |
| ಪೀ | ಕುಡಿ | ವೂ ಪಿದೋತೋ | ಅವನು ಕುಡಿದರೆ |
| ಜೋ | ಹೋಗು | ತೂ ಗೋತೋ | ನೀನು ಹೋದರೆ |
| ದ್ | ಕೊಡು | ವೂ ದಿನೋತೋ | ಅವನು ಕೊಟ್ಟರೆ |
| ಛೋಡ್ | ಬಿಡು | ವೂ ಛೋಡೇತೋ | ಅವರು ಬಿಟ್ಟರೆ |

**ಪೂರ್ಣವರ್ತಮಾನ ಕಾಲ:**

| | | | |
|---|---|---|---|
| ಸಾಂಭಳ್ | ಕೇಳು | ಮ ಸಾಂಬಳೋತೋ | ನಾನು ಕೇಳಿದ್ದರೆ |
| ಧಾಸ್ | ಓಡು | ಹಮ್ ಧಾಸೇತೋ | ನಾವು ಓಡಿದ್ದರೆ |
| ವಾ | ಬಾಚು | ವೂ ವಾಯೀತೋ | ಅವಳು ಬಾಚಿದ್ದರೆ |
| ಸಿಕ್ | ಕಲಿ | ಈ ಸೀಕೋತೋ | ಇವನು ಕಲಿತಿದ್ದರೆ |
| ಕ್ | ಹೇಳು | ಏ ಕೇತೋ | ಇವರು ಹೇಳಿದ್ದರೆ |

**ಅಭೂತಕಾಲ:**

| | | | |
|---|---|---|---|
| ಕರ್ | ಮಾಡು | 'ಮ' ಕರೋಕತೋ | ನಾನು ಮಾಡುವುದಾದರೆ |
| ಪಾಡ್ | ಎತ್ತು | 'ತಮ್' ಪಾಡೋಕತೋ | ನೀವು ಎತ್ತುವುದಾದರೆ |
| ಮೇಲ್ | ಇಡು | 'ವೂ' ಮೇಲೋಕತೋ | ಅವನು ಇಡುವುದಾದರೆ |
| ಚಾಲ್ | ನಡೆ | 'ಈ' ಚಾಲೋಕತೋ | ಇವಳು ನಡೆಯುವುದಾದರೆ |
| ಹುಬರ್ | ನಿಲ್ಲು | 'ವೂ' ಹುಬ್ರೋಕತೋ | ಅವರು ನಿಲ್ಲುವುದಾದರೆ |
| ವಾಟದೇ | ಕಾಯು | 'ತೂ' ವಾಟದೇಕತೋ | ನೀನು ಕಾಯುವುದಾದರೆ |

**ಕ್ರಿಯಾವಿಶೇಷಣಗಳು**

ಲಂಬಾಣಿ ಭಾಷೆಯಲ್ಲಿ ಕ್ರಿಯಾ ವಿಶೇಷಣಗಳು ಈ ಕೆಳಗಿನಂತೆ ನೋಡಬಹುದು.

೧. ಸಹಜ ಕ್ರಿಯಾವಿಶೇಷಣಗಳು

೨. ಸಾಧಿತ ಕ್ರಿಯಾವಿಶೇಷಣಗಳು

**೧. ಸಹಜ ಕ್ರಿಯಾ ವಿಶೇಷಣಗಳು**

**ಉದಾಹರಣೆಗೆ:**

| | | | |
|---|---|---|---|
| ಅಜಿ | 'ಪುನಃ' | ತಮ್ | ಅಜಿ ಆವಚೋ ? |
| | | ನೀವು | ಪುನಃ ಬರುತ್ತಿರಾ ? |
| ಸೇ | 'ಎಲ್ಲ' | ವೂ | ಸೇ ಲಾಯೇ |
| | | ಅವನು | ಎಲ್ಲ ತಂದ |
| ಜಲ್ದಿ | 'ಬೇಗ' | ತಮ್ | ಜಲ್ದಿ ಜಾವ್ |
| | | ನೀವೂ | ಬೇಗ ಹೋಗಿ |
| ಕಾಲ್ | 'ನಿನ್ನೆ' | ವೂ | ಕಾಲ್‌ಗೇಚ್ |
| | | ಅವರು | ಮೊನ್ನೆ ಹೋದರು |
| ಸವಾರ್ | 'ನಾಳೆ' | ತಮ್ | ಸಾವರ್ ಆವ್ |
| | | ನೀವು | ನಾಳೆ ಬನ್ನಿ |
| ಅಬ್ | 'ಈಗ್' | ತೂ | ಅಬ್ ಜಾರೋಚ |
| | | ನೀವು | ಈಗ ಹೋಗುತ್ತಿಯಾ? |

**೨. ಸಾಧಿತ ಕ್ರಿಯಾವಿಶೇಷಣಗಳುಉದಾಹರಣೆಗೆ:**

| | | | |
|---|---|---|---|
| ಓವ್‌ಡಿ | 'ಅತ್' | ತೂ | ಓವ್‌ಡಿ ಜೋ |
| | | ನೀನು | ಅತ್ ಹೋಗು |
| ಏವಡಿ | 'ಇತ' | ತಮ್ | ಏವಡಿ ಆವ್ |
| | | ನೀವು | ಇತ್ತ ಬನ್ನಿ |
| ಹನು | 'ಹೀಗೆ' | ಮ | ಹನು ಕರುಚು |
| | | ನಾನು | ಹೀಗೆ ಮಾಡುತ್ತೇನೆ. |

ನಾಮ ಪದಗಳಿಂದ ನಿಷ್ಪನ್ನಗೊಳ್ಳುವ ಕ್ರಿಯಾವಿಶೇಷಣಗಳು. ಕ್ರಿಯಾ ವಿಶೇಷಣ ಪ್ರತ್ಯಯ 'ಭಳನ್' ಎಂಬ ಪ್ರತ್ಯಯ ನಾಮಪದಗಳಿಗೆ ಸೇರಿಸಿದಾಗ ನಿಷ್ಪನ್ನಗೊಳ್ಳುತ್ತದೆ

ಭಳನ್ ಒಟ್ಟಾಗಿ

ಸೇ = ಒಟ್ಟಿಗೆ = ಸೇ ಭಳನ್

**ಉದಾಹರಣೆಗೆ :**

**ಲಂಬಾಣಿ ವಾಕ್ಯ :** ಊ ಆಜ್ ಸಾಂಜ್ ಸೇ ಭಳನ್ ಆವಚ್

**ಕನ್ನಡ ವಾಕ್ಯ :** ಅವರು ಇವತ್ತು ಸಂಜೆ ಒಟ್ಟಾಗಿ ಬರುತ್ತಾರೆ

| **ಲಂಬಾಣಿ** | **ಕನ್ನಡ** |
|---|---|
| ಸೊತಂತರ | ಸ್ವತಂತ್ರ |
| ಸೊತಂತರರೇತಿ | ಸ್ವತಂತ್ರವಾಗಿ |
| ಸೇ ಸೊತಂತರರೇತಿ ಜಗಣು | ಎಲ್ಲರೂ ಸ್ವತಂತ್ರವಾಗಿ ಬಾಳಬೇಕು |
| ದಮ್ | ನಿಧಾನ |
| ದಮೇತಿ | ನಿಧಾನವಾಗಿ |
| ತಮ್ ದಮೇತಿ ಜಾವ್ | ನೀವು ನಿಧಾನವಾಗಿಹೋಗಿ |

ಹೀಗೆ ವಾಕ್ಯ ರಚನೆ ಹಾಗೂ ಅರ್ಥಾನುಸಾರವಾಗಿ ಕ್ರಿಯಾ ವಿಶೇಷಣಗಳನ್ನು ಮೂರು ವಿಧವಾಗಿ ವಿಂಗಡಿಸಬಹುದು.

೨.೧. ಕಾಲವಾಚಕ ಕ್ರಿಯಾವಿಶೇಷಣಗಳು

೨.೨. ಸ್ಥಾನವಾಚಕ ಕ್ರಿಯಾವಿಶೇಷಣಗಳು

೨.೩. ರೀತಿವಾಚಕ ಕ್ರಿಯಾವಿಶೇಷಣಗಳು

**೨.೧ ಕಾಲವಾಚಕ ಕ್ರಿಯಾವಿಶೇಷಣಗಳು:**

**ಉದಾಹರಣೆಗೆ**

**ಅಜಿ ಮತ್ತೆ**

| | |
|---|---|
| ತೂ ಅಜಿ ಆಜೋ | ನೀನು ಮತ್ತೆ ಬಾ |
| ಮ ಅಜಿ ಖಾವುಂಚು | ನಾನು ಮತ್ತೆ ಊಟಮಾಡುತ್ತೇನೆ |

**ಸವಾರ್ ನಾಳೆ**

| | |
|---|---|
| ವೋ ಸವಾರ್ ಆರೇಚ್ | ಅವರು ನಾಳೆ ಬರುತ್ತಾರೆ |
| ತಮ್ ಸವಾರ್ ಆವ್ | ನೀವು ನಾಳೆ ಬನ್ನಿ |

**ಆಜ್ ಇವತ್ತು**

| | |
|---|---|
| ವೂ ಆಜ್ ಜಾವಚ್ | ಅವರು ಇವತ್ತು ಹೋಗುತ್ತಾನೆ |
| ವೂ ಆಜ್ ಆಯೇನಿ | ಅವಳು ಇವತ್ತು ಬರುವುದಿಲ್ಲ |

ಜನ್ನಾ ಆಗ

ವೂ ಜನ್ನಾ ಅಯೇತೋ (ಅವರು) ಆಗ ಬಂದಿದ್ದರು

ಮ ಜನ್ನಾ ಗೇತೋ (ನಾನು) ಆಗ ಹೋಗಿದ್ದೆ

ಪರಬಾತಿ ಬೆಳಿಗ್ಗೆ

ಲಂಬಾಣಿ ವಾಕ್ಯ : ಮ ಸವಾರ್ ಪರ್‌ಬಾತಿ ಆಯೇನ್ ಕೇಚು

ಕನ್ನಡ ವಾಕ್ಯ : ನಾನು ನಾಳೆ ಬೆಳಿಗ್ಗೆ ಬರಲು ಹೇಳಿದ್ದೇನೆ

ಲಂಬಾಣಿ ವಾಕ್ಯ : ತೂ ಸವಾರ್ ಪರ್‌ಬಾತಿ ಸಾಲಿನ್ ಜಾನ್ ಆ

ಕನ್ನಡ ವಾಕ್ಯ : ನೀನು ನಾಳೆ ಬೆಳಿಗ್ಗೆ ಶಾಲೆಗೆ ಹೋಗಿ ಬಾ

**ಕ್ರಿಯಾವಿಶೇಷಣಗಳು:**

ಶತ್ರರ್ಥಕ ಕಾರ್ಯರ್ಥಕ ಪ್ರತ್ಯಯಗಳು ಸೇರಿ ಕ್ರಿಯಾ ವಿಶೇಷಣಗಳು ಆಗುತ್ತದೆ.

**ಉದಾಹರಣೆಗೆ:**

ಲಂಬಾಣಿ ವಾಕ್ಯ : ಊ ಛೋರಾ **ಹಸ್ ತೋ** ಜಾರೋಚ್ !

ಕನ್ನಡ ವಾಕ್ಯ : ಆ ಹುಡುಗ **ನಗುತ್ತಾ** ಹೋಗುತ್ತಿದ್ದಾನೆ

ಲಂಬಾಣಿ ವಾಕ್ಯ : ಈ ಛೋರಾ **ರೋತೋರೋತೋ** ಆಯೋ !

ಕನ್ನಡ ವಾಕ್ಯ : ಈ ಹುಡುಗ **ಅಳುತ್ತಾ** ಬಂದನು

ಲಂಬಾಣಿ ವಾಕ್ಯ : ಊ ದಳಿಯಾ **ಸೇಲಾನ್ ಮನ್** ದೀನೋ !

ಕನ್ನಡ ವಾಕ್ಯ : ಅವನು ಎಲ್ಲ ಅನ್ನವನ್ನು **ತಂದು** ಕೊಟ್ಟನು

ಲಂಬಾಣಿ ವಾಕ್ಯ : ಊ ಆಚೋ **ಖಾಖಾನ್** ಜಾಡೋ ವೆಗೋ !

ಕನ್ನಡ ವಾಕ್ಯ : ಅವನು ಒಳ್ಳೆಯ ಊಟಮಾಡಿ ದಪ್ಪಾಗಿದ್ದಾನೆ.

ಇದೆ ರೀತಿ ದೇಕ್‌ದೇಕನ್ (ನೋಡಿ ನೋಡಿ) ದಾಂಸಾಂಸಂನ್ (ಓಡೋಡಿ) ಲೇಲೇನ್ (ಕೊಂಡ್ಕೊಂಡು) ಮುಂತಾದವುಗಳು ನೋಡಬಹುದು.

ಕಾರ್ಯರ್ಥಕ ಪ್ರತ್ಯಯ ಲೋಪವಾಗುವುದನ್ನು ಗಮನಿಸಬಹುದು.

**ಉದಾಹರಣೆಗೆ:**

| **ಲಂಬಾಣಿ** | **ಕನ್ನಡ** |
|---|---|
| ಖಾನ್ + ಖಾನ್ | ಖಾಖಾನ್ |
| ಲೇನ್ + ಲೆನ್ | ಲೇಲೆನ್ |
| ಉಟ್ + ಉಟನ್ | ಉಟಟ್‌ನ್ |
| ಸೊನ್ + ಸೋನ್ | ಸೊಸೋನ್ |
| ಲಾನ್ + ಲಾನ್ | ಲಾಲಾನ್ |
| ಲೂನ್ + ಲೂನ್ | ಲೂಲೂನ್ ಎಂದಾಗುತ್ತದೆ. |

ಕ್ರಿಯಾವಿಶೇಷಣ ಪ್ರತ್ಯಯಗಳು:

ಅಭೂತ ಕ್ರಿಯಾ ವಿಶೇಷಣ ಪ್ರತ್ಯಯ : 'ತೋ'

ತೋ:

ಉದಾಹರಣೆಗೆ :

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಪೀ | ಕುಡಿ | ಪೀತೋ | ಕುಡಿಯುತ್ತಾ |
| ದ್ | ಕೊಡು | ದೇತೋ | ಕೊಡುತ್ತಾ |
| ಜೋ | ಹೋಗು | ಜಾತೋ | ಹೋಗುತ್ತಾ |
| ಸಿಕ್ | ಕಲಿ | ಸಿಕ್‌ತೋ | ಕಲಿಯುತ್ತಾ |
| ಖೋದ್ | ಅಗಿ | ಖೋದ್‌ತೋ | ಅಗಿಯುತ್ತಾ |
| ಧಾಸ್ | ಓಡು | ಧಾಸತೋ | ಓಡುತ್ತಾ |
| ಮಾರ್ | ಹೊಡೆ | ಮಾರತೋ | ಹೊಡೆಯುತ್ತಾ |
| ಮೇಲ್ | ಇಡು | ಮೇಲ್ತೋ | ಇಡುತ್ತಾ |
| ಬೋಲ್ | ಮಾತಾಡು | ಬೋಲ್ತೋ | ಮಾತಾಡುತ್ತಾ |
| ಧೋತೋ | ತೊಳೆಯು | ಧೋತೋ | ತೊಳೆಯುತ್ತಾ |
| ಪಕಡ್ | ಹಿಡಿ | ಪಕಡತೋ | ಹಿಡಿಯುತ್ತಾ |
| ಖೋ | ತಿನ್ನು | ಖಾತೋ | ತಿನ್ನುತ್ತಾ |

ಭೂತಕ್ರಿಯಾ ವಿಶೇಷಣ ಪ್ರತ್ಯಯ: 'ನ್'

'ನ್':

ಈ ಮೇಲಿನ ವರ್ಗಕ್ಕೆ ಸೇರಿದ ಕ್ರಿಯಾ ಪದಗಳಿಗೆ ಸೇರುವ ಭೂತಕಾಲ ಪ್ರತ್ಯಯಗಳ ಹಿಂದೆ ಬರುತ್ತೆ.

ಉದಾಹರಣೆಗೆ :

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಸಿಕ್ | ಕಲಿ | ಸಿಕನ್ | ಕಲಿತು |
| ಕರ್ | ಮಾಡು | ಕರನ್ | ಮಾಡಿ |
| ಖೋದ್ | ಅಗೆ | ಖೋದನ್ | ಅಗೆದು |
| ಮರ್ | ಸಾಯು | ಮರನ್ | ಸತ್ತು |
| ಲಾ | ತರು | ಲಾನ್ | ತಂದು |
| ಕಾಟ್ | ಕಡಿ | ಕಾಟನ್ | ಕಡಿದು |
| ರ್ | ಇರು | ರೇನ್ | ಇದ್ದು |
| ಉತರ | ಇಳಿ | ಉತರನ್ | ಇಳಿದು |

**ನಿಷೇದಾರ್ಥಕ ಪ್ರತ್ಯಯಗಳು:**

**ಕಾಲವಾಚಕ ಪ್ರತ್ಯಯಗಳು:**

**ಭೂತಕಾಲ ವಾಚಕ ಪ್ರತ್ಯಯ: 'ನಿ':**

'ನಿ':

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ | |
|---|---|---|---|---|
| ಸಿಕ್ | ಕಲಿ | ಮ ಸಿಕೋಕೋನಿ | ನಾನು | ಕಲಿಯಲಿಲ್ಲ |
| ಲಾ | ತರು | ಹಮ್ ಲಾಯೋಕೋನಿ | ನಾವು | ತಂದಿಲ್ಲ |
| ಭಾಂಡ್ | ಬಯ್ಯು | ತಮ್ ಭಾಂಡೇಕೋನಿ | ನೀವೂ | ಬಯ್ಯಲಿಲ್ಲ |
| ವೇಚ್ | ಮಾರು | ವೋ ವೇಚೇಕೋನಿ | ಅವರು | ಮಾರಲಿಲ್ಲ |
| ಖೋ | ತಿನ್ನು | ವೂ ಖಾದೇಕೋನಿ | ಅದು | ತಿನ್ನಲಿಲ್ಲ |
| ಕ್ | ಹೇಳು | ವೋ ಕೇಕೋನಿ | ಅವುಗಳು | ಹೇಳಲಿಲ್ಲ |

**ವಿದ್ಯರ್ಥಕ ನಿಷೇಧ ಪ್ರತ್ಯಯ: 'ಮತ್':**

**'ಮತ್':**

**ಉದಾಹರಣೆಗೆ:**

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|---|---|
| ಕರ್ | ಮಾಡು | ಕರಮತ್ | ಮಾಡಬೇಡ | ಕರೋಮತ್ | ಮಾಡಬೇಡಿ |
| ಮರ್ | ಸಾಯು | ಮರ್‌ಮತ್ | ಸಾಯಬೇಡ | ಮರೋಮತ್ | ಮಾಯಬೇಡಿ |
| ಮೇಲ್ | ಇಡು | ಮೇಲ್‌ಮತ್ | ಇಡಬೇಡ | ಮೇಲೋಮತ್ | ಇಡಬೇಡಿ |
| ಭಾಂಡ್ | ಬಯ್ಯು | ಬಾಂಡ್‌ಮತ್ | ಬಯ್ಯುಬೇಡ | ಬಾಂಡ್‌ಮತ್ | ಬಯ್ಯಬೇಡಿ |
| ಬಾಂದ್ | ಕಟ್ಟು | ಬಾಂದಮತ್ | ಕಟ್ಟಬೇಡ | ಬಾಂದೋಮತ್ | ಕಟ್ಟಬೇಡಿ |
| ಕ್ | ಹೇಳು | ಕಮತ್ | ಹೇಳಬೇಡ | ಕೋಮತ್ | ಹೇಳಬೇಡಿ |

**ಕ್ರಿಯಾವಿಶೇಷಣ ನಿಷೇಧ ಪ್ರತ್ಯಯ: 'ಜು':**

**'ಜು':**

**ಉದಾಹರಣೆಗೆ:**

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಸಿಕ್ | ಕಲಿ | ಸೀಕೆನಿಜೂ | ಕಲಿಯದೆ |
| ಪಾಡ್ | ಎತ್ತು | ಪಾಡೇನಿಜೂ | ಎತ್ತದೆ |
| ಲಾ | ತರು | ಲಾಯನಿಜೂ | ತರದೆ |
| ಆಜೋ | ಬರು | ಆಯೇನಿಜೂ | ಬರದೆ |
| ಖೋ | ತಿನ್ನು | ಖಾಯೇನಿಜೂ | ತಿನ್ನದೆ |
| ಮಾರ್ | ಕೊಲ್ಲು | ಮಾರೇನಿಜೂ | ಕೊಲ್ಲದೆ |
| ಉತರ | ಇಳಿ | ಉತರೇನಿಜೂ | ಇಳಿಯದೆ |

೩. ಇತರ ವಿಶೇಷಣ ರೂಪಗಳು

| ಲಂಬಾಣಿ | ಕನ್ನಡ |
|---|---|
| ಗೋರೋಭೋರಾ | ಅಂದವಾದ ಹುಡುಗ |
| ಗೋರ್ ಭೋರಿ | ಅಂದವಾದ ಹುಡುಗಿ |
| ಆಚ್ ತಾಂಡ್ರಿ (ಅಸ್ಲಿ) | ಒಳ್ಳೆಹೆಂಗಸು, ಸ್ತ್ರೀ, ಹೆಂಡತಿ |
| ಆಚೋ ಅದ್ಮೀ (ಅಸ್ಲಿ) | ಒಳ್ಳೆಯ ಮನುಷ್ಯ |
| ಜಾಡೋ ಆದ್ಮೀ | ದಪ್ಪ ಮನುಷ್ಯ, ಪುರುಷ |
| ಜಾಡ್‌ತಾಂಡ್ರಿ | ದಪ್ಪ ಹೆಂಗಸು, ಹೆಂಡತಿ |

೩.೧ 'ಇ' ಕಾರಂತ ವಿಶೇಷಣಗಳು ಸ್ತ್ರೀಲಿಂಗ ರೂಪಗಳ ಮುಂದೆ ಬರುತ್ತವೆ.

ಉದಾಹರಣೆಗೆ:

| ಲಂಬಾಣಿ | ಕನ್ನಡ |
|---|---|
| ಖಾಟಿ ಆಮ್ಲಿ | ಹುಳಿ ಹುಣಸೆ ಹಣ್ಣು |
| ಸಾರಿರಾತ್ | ಇಡಿರಾತ್ರಿ |

೩.೨ ಕೌನಿ, ಅಶ್ಲಿ, ನಕ್ಲಿ, ಎನ್ನುವ ರೂಪಗಳು ಪುಲ್ಲಿಂಗ ರೂಪಗಳ ಮುಂದೆ ಬರುತ್ತವೆ.

| ಲಂಬಾಣಿ | ಕನ್ನಡ |
|---|---|
| ಆಶ್ಲಿ ಆಂಮ್ಲಿ | ಒಳ್ಳೆಯ ಹುಣಸೆ ಹಣ್ಣು |
| ಆಶ್ಲಿರೂಪ್ | ಒಳ್ಳೆಯ ರೂಪ |

೩.೩ ಕೆಲವು ವಿಶೇಷಣ ರೂಪಗಳು ಭಿನ್ನ ರೀತಿಯಲ್ಲಿರುತ್ತವೆ.

| | |
|---|---|
| ಆಚ್ಯಾತ್ (ಸ್ತ್ರೀ) | ಒಳ್ಳೆಯ ಮಾತು |
| ಆಚ್ ಸಾಕಿ (ಸ್ತ್ರೀ) | ಒಳ್ಳೆಯ ಕಥೆ |
| ಆಚೋ ಮಾಟಿ (ಪುಂ) | ಒಳ್ಳೆಯ ವ್ಯಕ್ತಿ |

೪. ಕೆಲವೊಂದು ವಿಶೇಷಣ ರೂಪಗಳಿಗೆ ಪರಿಯ್ಯಾಯ ರೂಪ ಸಹ ಇದೆ.

| | |
|---|---|
| ತಾತೋ, ಗರಮ್ | ಬಿಸಿ |
| ಗರಮ್‌ದೂದ್ | ಬಿಸಿಹಾಲು |
| ಮೊಟ್ಯಾರ್ | ಹರಯ (ದೊಡ್ಡ) |
| ಮೊಟ್ಯಾರ್ | ಹರಯದ ಹುಡಿಗಿ (ದೊಡ್ಡ ಹುಡುಗಿ) |

೪.೧ 'ಓ' ಕರಾಂತದಿಂದ ಕೂಡಿದ ವಿಶೇಷಣರೂಪಗಳು

| | |
|---|---|
| ತಾತೋ ಪಾಣಿ | ಬಿಸಿ ನೀರು |
| ತಾತ್ ಪಾಣಿ | ಬಿಸಿ ನೀರು |

೪.೨ ಇದೇ ರೀತಿ 'ಇ' ಕಾರಂತದಿಂದ ಕೊನೆಗೊಳ್ಳುವ ವಿಶೇಷಣ ರೂಪಗಳು ಸಹ ಇದೆ.

| | |
|---|---|
| ಆಚ್ ಛೋರಿ | ಒಳ್ಳೆಯ ಹುಡುಗಿ |
| ಅಸ್ಲಿ ಛೋರಿ | ಒಳ್ಳೆಯ ಹುಡುಗಿ |
| ಬೂಡ್ ತಾಂಡ್ರಿ | ವಯಸ್ಸಾದ ಹೆಣ್ಣು |
| ಬೂಡಿ ತಾಂಡ್ರಿ | ವಯಸ್ಸಾದ ಹೆಣ್ಣು |

೪.೩ ಈ ರೀತಿಯ ಪದಗಳು ಕೆಲವು ಸಲ ಬಹುವಚನ ಅರ್ಥಕೊಡುತ್ತವೆ.

| | |
|---|---|
| ಬೂಡೋ ಆದ್ಮಿ | ವಯಸ್ಸಾದ ಮುದುಕ |
| ಬೂಡ್/ಡೇ ಆದ್ಮಿ | ವಯಸ್ಸಾದ ಮುದುಕರು |

೪.೪ 'ಓ' ಕಾರಂತ ಪುಲ್ಲಿಂಗ ವಿಶೇಷಣಗಳು 'ಏ' ಕಾರಾಂತ ಬಹುವಚನಗಳಾಗುತ್ತವೆ.

| | |
|---|---|
| ಮೋಟೋ ಆದ್ಮಿ | ದೊಡ್ಡ ಮನುಷ್ಯ |
| ಮೋಟೇ ಆದ್ಮಿ | ದೊಡ್ಡ ಮನುಷ್ಯರು |

೪.೫ 'ಏ' ಕಾರಂತದ ನಂತರ ಏಕವಚನ ಬಹುವಚನದ ದ್ವಿತೀಯ ವಿಭಕ್ತಿ ರೂಪಗಳಾಗಿ ಸಿದ್ಧವಾಗುತ್ತವೆ.

| | |
|---|---|
| ಮೋಟೆ ಆದ್ಮಿತಿ | ದೊಡ್ಡ ಮನುಷ್ಯರಿಂದ |

ಆಂಧ್ರ ಪ್ರದೇಶದ 'ತೆಲಂಗಾಣ'ದಲ್ಲಿ ಸ್ತ್ರೀಲಿಂಗ ವಿಶೇಷಣಗಳು, 'ರಾಯಲಸೀಮೆ'ಯಲ್ಲಿ ಪುಲ್ಲಿಂಗ ವಿಶೇಷಣಗಳಾಗುತ್ತವೆ.

'ತೆಲಂಗಾಣ'ದಲ್ಲಿ (ಖರಾಭ್) ಎಂಬ ವಿಶೇಷಣ ರೂಪ ರಾಯಲಸೀಮೆಯಲ್ಲಿ 'ಬಲ್ಲಾ' ಎನ್ನುವ ಪರ್ಯಾಯ ರೂಪ ಇದೆ. ಈ ವಿಶೇಷಣ ರೂಪ ಲಿಂಗಾನುಸಾರವಾಗಿ ಒಳಗೊಂಡಿರುತ್ತದೆ.

| ಲಂಬಾಣಿ | ಕನ್ನಡ |
|---|---|
| ಬಲ್ಲಾ ಛೋರಾ | ಕೆಟ್ಟ ಹುಡುಗ |
| ಬಲ್ಲಾ ಛೋರಿ | ಕೆಟ್ಟ ಹುಡುಗಿ |
| ಬಲ್ಲಾ ವಾತ್ | ಕೆಟ್ಟ ಮಾತು |
| ಆಚ್‌ವಾತ್ | ಒಳ್ಳೆಮಾತು (ತೆಲಂಗಾಣ) |
| ಆಚೋವಾತ್ | ಒಳ್ಳೆಮಾತು (ರಾಯಲಸೀಮೆ) |

ಈ ಮೇಲಿನ ಉದಾಹರಣೆಗಳಲ್ಲಿ ಸೂಚಿಸಿರುವ 'ಖರಾಭ್' ಕರ್ನಾಟಕದ ಬಹುತೇಕ ಜಿಲ್ಲೆಗಳಲ್ಲಿ ಬಳಸಲಾಗುತ್ತದೆ. ಈ ಎರಡು ರೂಪಗಳಾರ್ಥ ಒಂದೇ ಆಗಿದ್ದರು ಬೇರೆ ಬೇರೆ ರೀತಿಯಲ್ಲಿ ಬಳಕೆಯಲ್ಲಿದೆ.

ವಿಶೇಷಣಗಳು ನಾಮ ಪ್ರತಿಪಾದನೆಯಲ್ಲಿ ಲಿಂಗಸೂಚಿಯಾಗಿ 'ಓ/ಇ' ಕಾರವಾಗಿ ಮಾರ್ಪಡುತ್ತವೆ.

| | |
|---|---|
| ಕೇಂಚ್ | ಕೆಸರು |
| ಕಿಂಚ್‌ಡೋ | ಕೆಸರಿನಿಂದ ಕೂಡಿದ |
| ಭೂಕ್ | ಹಸಿವು |
| ಭೂಕೋಆದ್ಮಿ | ಹಸಿದುಕೊಂಡವನು |
| ಭೂಕೀ ಭೋರಿ | ಹಸಿವೆಯಿಂದ ಕೂಡಿದವಳು |
| ಎಕ್ಲೋ ಬೇಟಾ | ಒಬ್ಬ ಮಗ |
| ಎಕ್ಲೀ ಬೇಟಿ | ಒಬ್ಬ ಮಗಳು |

ಸಂಯುಕ್ತ ವಿಶೇಷಣಗಳು:

| | |
|---|---|
| ಮೋಟ್ ಮೋಟ್ | ದೊಡ್ಡ ದೊಡ್ಡ |
| ಬುಡ್ ಬುಡ್ | ಮುದುಕ ಮುದುಕರು |

ಜಂಟಿ ವಿಶೇಷಣಗಳು ಕೂಡ ಕೆಲವು ಇವೆ. ಇವು ಇನ್ನೊಂದು ವರ್ಗ

| | |
|---|---|
| ಮೋಟ್ ನಾನ್ | ದೊಡ್ಡ ಸಣ್ಣ |
| ಆಚ್ ಬಲ್ಲಾ | ಒಳ್ಳೆ ಕೆಟ್ಟದು |

**ಅವ್ಯಯಗಳು :**

ಉದಾಹರಣೆಗೆ

ಓವ್‌ಡಿ ಆಕಡೆ

ಲಂಬಾಣಿ ವಾಕ್ಯ : 'ತಮ್' ಓವ್‌ಡಿ ಜಾವತೋ ವೋನ್ ಬಲಾನ್ ಲಾ

ಕನ್ನಡ ವಾಕ್ಯ : 'ನೀವೂ' ಆಕಡೆ ಹೋಗುವುದಾದರೆ ಅವರನ್ನು ಕರಕೊಂಡು ಬನ್ನಿ

ಲಂಬಾಣಿ ವಾಕ್ಯ : 'ಮ' ಓವ್‌ಡಿ ಗೇತೋ ಕೋಯಿ ಛೇನಿ

ಕನ್ನಡ ವಾಕ್ಯ : 'ನಾನು' ಆಕಡೆ ಹೋಗಿದ್ದೆ ಅಲ್ಲಿ ಯಾರು ಇಲ್ಲ

ಏವ್‌ಡಿ ಈಕಡೆ

ಲಂಬಾಣಿ ವಾಕ್ಯ : 'ವೂ' ಏವ್‌ಡಿ ಆವತೋ ತಮ್ ಭೀ ಆವೋ

ಕನ್ನಡ ವಾಕ್ಯ : 'ಅವರು' ಈಕಡೆ ಬಂದರೆ ನೀವೂ ಬನ್ನಿ

ಲಂಬಾಣಿ ವಾಕ್ಯ : 'ವೋನ್' ಏವಡಿ ಆಯೇನ್ ಕ

ಕನ್ನಡ ವಾಕ್ಯ : 'ಅವಳನ್ನು' ಈಕಡೆ ಬರಲು ಹೇಳಿ

ಹೇಟ್ ಕೆಳಗೆ

ಲಂಬಾಣಿ ವಾಕ್ಯ : 'ವೂ' ಪೆನ್ ಟೇಬಲೇರ್ ಹೇಟ್ ಘಾಲಿ

ಕನ್ನಡ ವಾಕ್ಯ : 'ಅವಳು' ಪೆನ್ನು ಮೇಜಿನ್ ಕೆಳಗೆ ಹಾಕಿದಳು

ಲಂಬಾಣಿ ವಾಕ್ಯ : 'ಈ' ಟೇಬಲೇರ್ ಹೇಟ್ ಮೇಲಿಯಾ

ಕನ್ನಡ ವಾಕ್ಯ : ಇದನ್ನು ಟೇಬಲ್ ಕೆಳಗೆ ಇಟ್ಟು ಬಾ

ಮುಂಡಾಗ್ ಮುಂದೆ

ಲಂಬಾಣಿ ವಾಕ್ಯ : ಕುತ್ರಾ ವಂದೂರ್ ಘರೇರ್ ಮುಂಡಾಗ್ ಬೇಟೋಚ್

ಕನ್ನಡ ವಾಕ್ಯ : ನಾಯಿ ಅವರ ಮನೆಯ ಮುಂದೆ ಕೂತಿದೆ

ಲಂಬಾಣಿ ವಾಕ್ಯ : ವೂ ಓರ್ ಮುಂಡಾಗ್ ಮೇಲನ್ ಆ

ಕನ್ನಡ ವಾಕ್ಯ : ಅದನ್ನು ಅದರ ಮುಂದೆ ಇಟ್ಟು ಬಾ

ಮಾಯಿ ಒಳಗೆ

ಲಂಬಾಣಿ ವಾಕ್ಯ : ಹಮ್ ಒಂದೂರ್ ಘರೇ ಮಾಯಿ ಜಾನ್ ಆಯೇ

ಕನ್ನಡ ವಾಕ್ಯ : ನಾವು ಅವರ ಮನೆ ಒಳಗೆ ಹೋಗಿ ಬಂದೆವು

ಲಂಬಾಣಿ ವಾಕ್ಯ : ವೋರ್ ರಪಿಯಾ ಖಪಾಟೇರ್ ಮಾಯಿ ಮೇಲೋ

ಕನ್ನಡ ವಾಕ್ಯ : ಅವರ ಹಣವನ್ನು ಕಪಾಟಿನ ಒಳಗೆ ಇಟ್ಟಿದೆ

ಭಾರ್ ಹೊರಗೆ

ಲಂಬಾಣಿ ವಾಕ್ಯ : ವಂದೂರ್ ಸಿಬ್ಬಿ ಘರೇರ್ ಭಾರ್ ಸೂತಿಚ್

ಕನ್ನಡ ವಾಕ್ಯ : ಅವರ ಬೆಕ್ಕು ಮನೆಯ ಹೊರಗೆ ಮಲಗಿದೆ

ಲಂಬಾಣಿ ವಾಕ್ಯ : ಮ ವೋನ್ ಘರೇರ್ ಭಾರ್ ಹುಬರನ್ ಬಲಾಯೋ

ಕನ್ನಡ ವಾಕ್ಯ : ನಾನು ಅವನನ್ನು ಮನೆಯ ಹೊರಗೆ ನಿಂತು ಕರೆದೆ

ಲಾರ್ ಹಿಂದೆ

ಲಂಬಾಣಿ ವಾಕ್ಯ : ವಂದೂರ್ ಘರೇರ್ ಲಾರ್ ಮೋಟೋ ಅಂಬಾರ್ ಝಾಡ್ ಛ್

ಕನ್ನಡ ವಾಕ್ಯ : ಅವರ ಮನೆ ಹಿಂದೆ ದೊಡ್ಡ ಮಾವಿನ ಮರ ಇದೆ

ಲಂಬಾಣಿ ವಾಕ್ಯ : ವೂ ಸಾಲಿರ್ ಲಾರ್ ಜಾನ್ ಮೂತನ್ ಆಯೋ

ಕನ್ನಡ ವಾಕ್ಯ : ಅವನು ಶಾಲೆಯ ಹಿಂದೆ ಹೋಗಿ ಮೂತ್ರ ವಿಸರ್ಜನೆ ಮಾಡಿಬಂದ

ಅದಿವಚಾ ಮಧ್ಯ

ಲಂಬಾಣಿ ವಾಕ್ಯ : ವೋರ್ ಅದಿವಚಾ ಜಾಗಾ ಆಚ್ ಛ

ಕನ್ನಡ ವಾಕ್ಯ : ಅದರ ನಡು/ಮಧ್ಯ ಜಾಗ ಬಹಳ ಚೆನ್ನಾಗಿದೆ.

ಲಂಬಾಣಿ ವಾಕ್ಯ : ವಂದೂರ್ ಢೋರ್ ತಮಾರ್ ಖೇತರ್ ಅದಿವಚಾ ಖಾರೋತೋ

ಕನ್ನಡ ವಾಕ್ಯ : ಅವರ ದನ ನಿಮ್ಮ ಹೊಲ ಮಧ್ಯ ಮೇಯುತ್ತಿದೆ.

## ೨.೩. ರೀತಿವಾಚಕ ಕ್ರಿಯಾವಿಶೇಷಣಗಳು

**ಜೋರತಿ ಜೋರಾಗಿ**

| | |
|---|---|
| ವೂ ಜೋರ್‌ತಿ ಹಸೋ | ಅವನು ಜೋರಾಗಿ ನಕ್ಕನು |
| ವೂ ಜೋರ್‌ತಿ ನಾಚೀ | ಅವಳ ಕುಣಿತ ಚೆನ್ನಾಗಿತ್ತು |

**ದಮೇತಿ ನಿಧಾನವಾಗಿ**

| | |
|---|---|
| ಏ ದಮೇತಿ ಖಾದೇ | ಇವರು ನಿಧಾನವಾಗಿ ಊಟಮಾಡಿದರು |
| ತಮ್ ದಮೇತಿ ಆವ್ | ನೀವು ನಿಧಾನವಾಗಿ ಬನ್ನಿ |

**ಜಲ್ದಿ ಬೇಗ**

| | |
|---|---|
| ಈ ಬಾಟಿ ಜಲ್ದಿ ಖೋ | ಈ ರೊಟ್ಟಿ ಬೇಗ ತಿನ್ನು |
| ಹಾಟೇತಿ ಜಲ್ದಿ ಆಯೋ | ಅವನು ಸಂತೆಯಿಂದ ಬೇಗ ಬಂದನು |

■

## ಅಧ್ಯಾಯ - ೮

## ಲಂಬಾಣಿಭಾಷೆ: ನಾಮಪದ ಮತ್ತು ನಾಮವಿಶೇಷಣಗಳು

ಲಂಬಾಣಿ ಭಾಷೆಯಲ್ಲಿ ನಾಮಪದ ಲಿಂಗಗಳು ವಂಶ ಪಾರಂಪರ್ಯದಿಂದ ಬಂದಿದೆ. ಈ ಲಂಬಾಣಿ ನಾಮಪದದಲ್ಲಿ ಎರಡು ರೀತಿಯ ಲಿಂಗಗಳಿವೆ. ೧. ಪುಲ್ಲಿಂಗ ೨.ಸ್ತ್ರೀಲಿಂಗ. ಲಂಬಾಣಿ ಭಾಷೆಯಲ್ಲಿ ನಪುಂಸಕ ಲಿಂಗವೆಂಬುದು ಇಲ್ಲ. ನಪುಂಸಕ ಲಿಂಗದಂತಹ ಪದಗಳು ಈ ಎರಡು ಲಿಂಗಗಳಲ್ಲಿಯೇ ಸೇರಿ ಹೋಗುತ್ತದೆ. ಅದೇ ರೀತಿ ನಾಮಪದದಲ್ಲಿ ಏಕವಚನ, ಬಹುವಚನ ಎಂಬ ಎರಡು ರೀತಿಯ ವಚನಗಳಿವೆ. ಅವು ಪ್ರತ್ಯಯದಿಂದ ಕೂಡಿರುತ್ತವೆ. ಸಂದರ್ಭಾನುಸಾರ ಒಂದೇ ಪದವು ಏಕವಚನ ಹಾಗೂ ಬಹುವಚನಗಳರೆಡನ್ನು ಸೂಚಿಸುತ್ತವೆ.

೧. ಲಂಬಾಣಿ ಭಾಷೆಯಲ್ಲಿ ಪುಲಿಂಗ 'ಆ' ಕಾರವಾಗಿ ಸ್ತ್ರೀಲಿಂಗ 'ಇ' ಕಾರವಾಗಿ ನಾಮಪದಗಳು ಕೊನೆಗೊಳ್ಳುತ್ತವೆ.

**ಉದಾಹರಣೆ:**

| ಪುಲ್ಲಿಂಗ | ಸ್ತ್ರೀಲಿಂಗ |
|---|---|
| ಛೋರಾ | ಹುಡುಗ |
| ಛೋರಿ | ಹುಡುಗಿ |
| ಭೇಸಾ | ಕೋಣ |
| ಭೇಂಸಿ | ಎಮ್ಮೆ |
| ಬೇಟಾ | ಮಗ |
| ಬೇಟಿ | ಮಗಳು |

**ಇತರ ಪದಗಳು**

| ಪುಲ್ಲಿಂಗ | | ಸ್ತ್ರೀಲಿಂಗ | |
|---|---|---|---|
| ಬರಪ್ | ಹಿಮ | ದಾದಿ | ಅಜ್ಜಿ |
| ಘರ್ | ಮನೆ | ಲಕಡಿ | ಕಟ್ಟಿಗೆ |

| | | | |
|---|---|---|---|
| ಕೇಳಾ | ಬಾಳೆಹಣ್ಣು | ಬಾಟಿ | ರೊಟ್ಟಿ |
| ಲಕೋ | ಬರೆ | ಮಾಕಿ | ನೊಣ |

೨. ಪ್ರಥಮ ಪುರುಷ ಏಕವಚನ ಬಹುವಚನಗಳಲ್ಲಿ ಪುಲ್ಲಿಂಗ, ಸ್ತ್ರೀಲಿಂಗ ಹಾಗೂ ನಪುಂಸಕ ಲಿಂಗಗಳಿಗೆ ಈ ಭಾಷೆಯಲ್ಲಿ ಭೇದವಿಲ್ಲ.

**ಉದಾಹರಣೆ:**

| | | | | |
|---|---|---|---|---|
| | ಅವನು | | ಅವರು | (ಸ್ತ್ರೀಲಿಂಗ) |
| ವೂ | ಅವಳು | ವೂ | ಅವರು | (ಸ್ತ್ರೀಲಿಂಗ) |
| | ಅದು | | ಅವು | (ಸ್ತ್ರೀಲಿಂಗ) |

೩. ಈ ಭಾಷೆಯಲ್ಲಿ ಕ್ರಿಯಾಪದ ರೂಪಗಳು ಕೆಲವು ಸಂದರ್ಭಗಳಲ್ಲಿ ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗಗಳಲ್ಲಿ ಯಾವ ವ್ಯತ್ಯಾಸವೂ ಕಂಡುಬರುವುದಿಲ್ಲ.

**ಉದಾಹರಣೆ:**

| ಲಂಬಾಣಿ | ಕನ್ನಡ |
|---|---|
| ವೂ ಪಿರೋಚ್ | ಅವನು ಕುಡಿಯುತ್ತಾನೆ |
| ವೂ ಪಿರೀಚ್ | ಅವಳು ಕುಡಿಯುತ್ತಾಳೆ /ಅದು ಕುಡಿಯುತ್ತದೆ. |
| ವೂ ಆರೋಚ | ಅವನು ಬರುತ್ತಿದ್ದಾನೆ |
| ವೂ ಆರೀಚ್ | ಅವಳು ಬರುತ್ತಿದ್ದಾಳೆ /ಅದು ಬರುತ್ತದೆ |

೪. 'ನ' ವರ್ಣದ ಸ್ಥಾನದಲ್ಲಿ 'ಣ' ವರ್ಣ ಪ್ರಯೋಗವು ಈ ಭಾಷೆಯಲ್ಲಿ ಕಂಡುಬರುತ್ತವೆ. ಈ ಬಗೆಯ ವರ್ಣವ್ಯತ್ಯಾಸವು ರಾಜಸ್ಥಾನಿ ಹಾಗೂ ಮರಾಠಿ ಭಾಷೆಗಳಲ್ಲಿ ಕಂಡುಬರುತ್ತದೆ.

**ಉದಾಹರಣೆ:**

| ಲಂಬಾಣಿ | | ಕನ್ನಡ | ಲಂಬಾಣಿ | | ಕನ್ನಡ |
|---|---|---|---|---|---|
| ಮಾನಸ | ಮಾಣಸ | ಮನುಷ್ಯ | ಪಸಿನಾ | ಪಸಿಣಾ | ಬೆವರು |
| ಕೇನು | ಕೇಣು | ಹೇಳಬೇಕು | ರೇನು | ರೇಣು | ಇರಬೇಕು |
| ಬದನಾ | ಬದಣಾ | ಹಗ್ಗ | ಲೇನು | ಲೇಣು | ತಗೋಬೇಕು |
| ಕಾನ | ಕಾಣ | ಕಿವಿ | ಕೇನು | ಕೇಣು | ಹೇಳಬೇಕು |

೫. ಈ ಭಾಷೆಯಲ್ಲಿ ಮಹಾಪ್ರಾಣಗಳು ಅಧಿಕವಾಗಿ ಪ್ರಯೋಗವಾಗುತ್ತವೆ. ಇವು ಅರ್ಥವ್ಯತ್ಯಾಸಕ್ಕೂ ಕಾರಣವಾಗುತ್ತವೆ. ಮರಾಠಿ ಭಾಷೆಯ ಪ್ರಭಾವವೇ ಇದಕ್ಕೆ ಕಾರಣವಾಗಿರುವಂತೆ ತೋರುತ್ತದೆ.

ಉದಾಹರಣೆ:

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಕಾಡ್ | ತಗೆ | ಖಾಡೇ | ತಗ್ಗು |
| ಜಡ್ | ಬೇರು | ಝಡ್ | ಉದುರು |
| ಗೋಡಿ | ಗೋಡೆ | ಘೋಡಿ | ಕುದರೆ (ಹೆಣ್ಣು) |
| ಪಾಡ್ | ಎತ್ತು | ಫಾಡ್ | ಹರಿ |
| ಚೂಟ್ | ಅಂಟಿಕೊಳ್ಳು | ಛೂಟ್ | ಬಿಚ್ಚಿಕೊಳ್ಳು |
| ಡೋರ್ | ಜಗ್ಗು | ಢ್ಹೋರ್ | ದನ |
| ಚರೀ | ಹಗ್ಗ | ಛರೀ | ಮಚ್ಚು |
| ಕರ್ | ಮಾಡು | ಖರ್ | ಎತ್ತಿನಕಾಲಿನ ಕೆಳ ಭಾಗ |

೬. ಈ ಭಾಷೆಯಲ್ಲಿ ಹಲವು ಪದಗಳು ಧ್ವನಿ ವ್ಯತ್ಯಾಸವನ್ನು ಪಡೆದಿರುವಂತೆ ಅವು ಅರ್ಥವ್ಯತ್ಯಾಸವು ಹೊಂದಿವೆ.

ಉದಾಹರಣೆ:

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಜಾಡ್ | ದಪ್ಪ | ಜಾಡ್ | ದವಡೆಹಲ್ಲು |
| ಝಾಡ್ | ಕಸಗುಡಿಸು | ಝಾಡ್ | ಗಿಡ, ಮರ, ಔಷಧ |
| ಪೇರ್ | ಧರಿಸು | ಪೇರ್ | ಬಿತ್ತು, ಈಜು |
| ಮಾರ್ | ನನ್ನ | ಮಾರ್ | ಹೊಡೆ |

**ನಾಮಪದಗಳ ನಿಷ್ಪತಿ :**

**ಕ್ರಿಯಾ ಪದಗಳಿಂದ ನಿಷ್ಪತ್ತಿಯಾದ ನಾಮಪದಗಳು :**

**'ಣ್' ಪ್ರತ್ಯಯಿಂದ :**

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ಮರ್ | ಸಾಯು | ಮರಣ್ | ಸಾವು |
| ಬಾಂದ್ | ಕಟ್ಟು | ಬಾಂದಣ್ | ಕಟ್ಟಡ |
| ನವ್ | ಬಗ್ಗು | ನವಣ್ | ನಮಸ್ಕರಿಸು |

| | | | |
|---|---|---|---|
| ಖರ್ಪ | ಕಳೆ | ಖರ್ಪಣ್ | ಕಳೆ ತಗೆಯುವಿಕೆ |
| ನಿಂದ್ | ನಿದ್ದೆ | ನಿಂದಣ್ | ನಿದ್ರಿಸು |

**'ಓ' ಪ್ರತ್ಯಯಿಂದ :**

| | | | |
|---|---|---|---|
| ಕಾಟ್ | ಕಡಿ | ಕಾಟ್ಗೋ | ಕಡಿತ |
| ಹಕಾರ್ | ಕೂಗು | ಹಕಾರೋ | ಕೂಗುವಿಕೆ |
| ವಾಟದೇಕ್ | ಕಾಯು | ವಾಟ್‌ದೇಕೋ | ಕಾಯುವಿಕೆ |
| ಮೇಳ್ | ಕೂಡು | ಮೇಳೋ | ಕೂಟ |
| ಘಾಲ್ | ಹಾಕು | ಘಾಲೋ | ಹಾಕುವಿಕೆ |
| ಪಾಳ್ | ಪಾಲಿಸು | ಪಾಳೋ | ಪಾಲನೆ |

**'ಪರ್' ಪ್ರತ್ಯಯಿಂದ :**

| | | | |
|---|---|---|---|
| ಓಕರ್ | ತಿರುಗಾಡು | ಓಕರ್‌ಪರ್ | ತಿರುಗಾಟ |
| ಧಾಸ್ | ಓಡು | ಧಾಸಪರ್ | ಓಡಾಟ |
| ಖಿದ್ | ನೆಗೆ | ಖಿದ್‌ಪರ್ | ನೆಗೆದಾಟ |
| ನಾಚ್ | ಕುಣಿ | ನಾಚ್‌ಪರ್ | ಕುಣಿದಾಟ |

**'ಅಣೋ' ಪ್ರತ್ಯಯಿಂದ :**

| | | | |
|---|---|---|---|
| ಕಾಟ್ | ಕೋಯು | ಕಾಟಣೋ | ಕೋಯುವಿಕೆ |
| ಹಾರ್ | ಸೋಲು | ಹಾರಣೋ | ಸೋಲುವಿಕೆ |
| ದುಃಖ್ | ನೋವು | ದುಃಖ್‌ಣೋ | ನೋಯುವಿಕೆ |
| ಚಾಲ್ | ನಡೆ | ಚಾಲಣೋ | ನಡೆಯುವಿಕೆ |

**'ಲಾ' ಪ್ರತ್ಯಯಿಂದ**

| | | | |
|---|---|---|---|
| ಕರ್ | ಮಾಡು | ಕರಲಾ | ಮಾಡುವಿಕೆ |
| ವರ್ | ತರು | ವರ್‌ಲಾ | ತರುವಿಕೆ |
| ಪರ್ | ಆಚೆ | ಪರ್‌ಲಾ | ಆಚೆಯುವಿಕೆ |
| ಬದಲ್ | ಬದಲು | ಬದ್‌ಲಾ | ಬದಲಾವಣೆ |
| ಘಾಲ್ | ಹಾಕು | ಘಾಲ್‌ಲಾ | ಹಾಕುವಿಕೆ |

| | | | |
|---|---|---|---|
| ಕಾಡ್ | ತಗೆ | ಕಾಡ್‌ಲಾ | ತಗೆಯುವಿಕೆ |
| ದೇಕ್ | ನೋಡು | ದೇಕ್‌ಲಾ | ನೋಡುವಿಕೆ |

**'ಣೋ' ಪ್ರತ್ಯಯಿಂದ**

| | | | |
|---|---|---|---|
| ಖಜಾ | ತುರಿ | ಖಜಾಣೋ | ತುರಿಸುವಿಕೆ |
| ಧೂಜ್ | ನಡಗು | ಧೂಜ್‌ಣೋ | ನಡುಗುವಿಕೆ |
| ಖಾ/ಖೋ | ತಿನ್ನು | ಖಾಣೋ | ತಿಂಡಿ |
| ಪೀ | ಕುಡಿ | ಪೀಣೋ | ಕುಡಿಯುವಿಕೆ |
| ರೋ | ಅಳು | ರೋಣೋ | ಅಳುವಿಕೆ |

**'ಟಾಂಗ್' ಪ್ರತ್ಯಯಿಂದ**

| | | | |
|---|---|---|---|
| ತೀನ್ | ಮೂರು | ತೀನ್‌ಟಾಂಗ್ | ಮೂರು ಕಾಲುಳ್ಳದು |
| ಚಾರ್ | ನಾಲ್ಕು | ಚಾರ್‌ಟಾಂಗ್ | ನಾಲ್ಕು ಕಾಲುಳ್ಳದ್ದು |

**'ಆಳೋ' ಪ್ರತ್ಯಯಿಂದ**

| | | | |
|---|---|---|---|
| ಘಾಣೋ | ಗಾಣ | ಘಾಣೇವಾಳೋ | ಗಾಣಿಗ |
| ಪಿಸಾ | ಹಣ | ಪಿಸಾವಾಳೋ | ಹಣವಂತ |
| ಗಣ | ಗುಣ | ಗುಣೇವಾಳೋ | ಗುಣವಂತ |

**'ಆಳೋ' ಪ್ರತ್ಯಯಿಂದ**

| | | | |
|---|---|---|---|
| ಕಾಟ್ | ಕಡಿಯು | ಕಾಟಾಳೋ | ಕಡಿಯುವಂತದ್ದು ಚೇಳು |
| ಸುಂಡ್ | ಸೊಂಡಿಲು | ಸುಂಡಾಳೋ | ಸೊಂಡಿಲು ಇರುವಂತದ್ದು ಆನೆ |
| ಟಾಂಗ್ | ಕಾಲು | ಟಾಂಗಾಳೋ | ಒಂಟಿ ಕಾಲುಳ್ಳವವನು |
| ಪೇಟ್ | ಹೊಟ್ಟೆ | ಪೆಟಾಳೋ | ಹೊಟ್ಟೆ ಇರುವಂತದ್ದು ಗಣಪತಿ |

**'ವಾ' ಪ್ರತ್ಯಯಿಂದ**

| | | | |
|---|---|---|---|
| ಚಕ್ | ಜಾಣ | ಚಕ್‌ವಾ | ಜಾಣತನ |

**'ಆ' ಪ್ರತ್ಯಯಿಂದ**

| | | | |
|---|---|---|---|
| ಬಾಂದ್ | ಕಟ್ಟು | ಬಾಂದಾ | ಗಂಟು |
| ಗಾಟ್ | ಹೊಲಿಸು | ಗಾಟಾ | ಹೊಲಿಗೆ |
| ಚಾಟ್ | ನೆಕ್ಕು | ಚಾಟಾ | ನೆಕ್ಕುವಿಕೆ |

| | | | |
|---|---|---|---|
| ಭಾಟ್ | ಕಲ್ಲು | ಭಾಟಾ | ಬಂಡೆ |
| ವರ್ಗ | ವರ್ಗ | ವರ್ಗಾ | ವರ್ಗಾವಣೆ |

**'ತ್' ಪ್ರತ್ಯಯಿಂದ**

| | | | |
|---|---|---|---|
| ವಾತೇಕರ್ | ಮಾತಾಡು | ವಾತ್ | ಮಾತು |
| ಸಾತ್‌ಕರ್ | ಸಹಾಯಮಾಡು | ಸಾತ್ | ಸಹಾಯ |

**'ವಾಡೋ' ಪ್ರತ್ಯಯಿಂದ**

| | | | |
|---|---|---|---|
| ರಾಜ್ | ರಾಜ | ರಾಜ್‌ವಾಡೋ | ರಾಜ್ಯ |

**'ಪಣ್' ಪ್ರತ್ಯಯಿಂದ**

| | | | |
|---|---|---|---|
| ಹುಶಾರ್ | ಜಾಣ್ | ಹುಶಾರ್‌ಪಣ್ | ಜಾಣತನ |
| ಖರಾಬ್ | ಕೆಟ್ಟ | ಖರಾಬ್‌ಪಣ್ | ಕೆಟ್ಟತನ |

**'ಗೋ' ಪ್ರತ್ಯಯಿಂದ**

| | | | |
|---|---|---|---|
| ಫರ್ | ತಿರುಗು | ಫರ್‌ಗೋ | ತಿರುಗುವಿಕೆ |
| ಚರ್ | ಮೇಯು | ಚರ್‌ಗೋ | ಮೇಯಿದು |
| ತರ್ | ತೇಲು | ತರ್‌ಗೋ | ತೇಲಿಕೆ/ತೇಲುವಿಕೆ |
| ಮರ್ | ಸಾಯು | ಮರ್‌ಗೋ | ಸಾವು/ಸಾಯುವಿಕೆ |
| ಕರ್ | ಮಾಡು | ಕರ್‌ಗೋ | ಮಾಡುವಿಕೆ |

**'ಗ' ಪ್ರತ್ಯಯಿಂದ**

| | | | |
|---|---|---|---|
| ಮಾನ್ | ಒಪ್ಪು | ಮಾನ್‌ಗೆ | ಒಪ್ಪಿಗೆ |
| ರ | ಇರು | ರೇಗೆ | ಇದ್ದರು |
| ಕ್ | ಹೇಳು | ಕೇಗೆ | ಹೇಳಿದ್ದು |

**'ಣೋ' ಪ್ರತ್ಯಯಿಂದ**

| | | | |
|---|---|---|---|
| ಹಸ್ | ನಗು | ಹಸಣೋ | ನಗಿಸು, ನಗುವಿಕೆ |
| ನಂಬ್ | ನಂಬುಕೆ | ನಂಬ್‌ಣೋ | ನಂಬಿಕೆ |
| ಪೂಚ್ | ವಿಚಾರಿಸು | ಪೂಚಣೋ | ವಿಚಾರಣೆ |
| ಲೀಪ್ | ಸಾರು | ಲೀಪಣೋ | ಸಾರುವಿಕೆ |

'ಮೇಲೋ' ಪ್ರತ್ಯಯಿಂದ

| | | | |
|---|---|---|---|
| ಭೇಳ್ | ಬೆರಸು | ಭೇಳ್‌ಮೇಲೋ | ಬೆರಸುವಿಕೆ |
| ಲಾ | ತರು | ಲಾಮೇಲೋ | ತರುವಿಕೆ |
| ದೇ | ಕೊಡು | ದೇಮೇಲೋ | ಕೊಡುವಿಕೆ |
| ಕ | ಹೇಳು | ಕೇಮೇಲೋ | ಹೇಳುವಿಕೆ |
| ರೋ | ಅಳು | ರೋಮೇಲೋ | ಅಳುವಿಕೆ |
| ಖಾ | ತಿನ್ನು | ಖಾಮೇಲೋ | ತಿನ್ನುವಿಕೆ |
| ಭೇಸ್ | ಕೂಡು | ಭೇಸ್‌ಮೇಲೋ | ಕೂತಿದ್ದು |
| ಸೋ | ಮಲಗು | ಸೋಮೇಲೋ | ನಿದ್ದೆ, ನಿದ್ರಿಸು |

'ಣಿ' ಪ್ರತ್ಯಯಿಂದ

| | | | |
|---|---|---|---|
| ಲಕ್ | ಬರೆ | ಲಕ್‌ಣಿ | ಬರವಣಿಗೆ |
| ಚಕ್ | ಚೂರು | ಚಕ್‌ಣಿ | ಚಕ್ಕೆ (ಮರದ ಚಕ್ಕೆ) |
| ಢಕ್ | ಮುಚ್ಚು | ಢಕ್‌ಣಿ | ಮುಚ್ಚಣಿಕೆ |
| ಫೂಕ್ | ಊದು | ಫೂಕ್‌ಣಿ | ಊದುಗೊಳವೆ |
| ಟಾಕ್ | ಹಿಂದೆ | ಟಾಕ್‌ಣಿ | ಹಿಮ್ಮಡಿ |

'ತಿ' ಪ್ರತ್ಯಯಿಂದ

| | | | |
|---|---|---|---|
| ಜೋರ್ | ಒತ್ತು | ಜೋರ್‌ತಿ | ಒತ್ತಡ |
| ಲಾರ್ | ಹಿಂದೆ | ಲಾರ್‌ತಿ | ಹಿಂದಿದ್ದ |
| ಭಾರ್ | ಹೊರ | ಭಾರ್‌ತಿ | ಹೊರಗಿಂದ |

ನಾಮ ಪ್ರಕೃತಿಯಿಂದ ನಿಷ್ಪತ್ತಿಯಾದ ನಾಮಪದಗಳು

ಓ - ಈನ್, ಇ - ಯಾಣಿ - ಈನ್ - ಪ್ರತ್ಯಯಿಂದ :

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ | (ಪ್ರತ್ಯಯ) |
|---|---|---|---|---|
| ಬೇರ್ | ಕಿವುಡುತನ | ಬೇರೋ | ಕಿವುಡ | ಓ |
| ಬೇರ್ | ಕಿವುಡುತನ | ಬೇರಿ | ಕಿವುಡಿ | ಇ |
| ವೇಂಡ್ | ಹುಚ್ಚು | ವೇಂಡೋ | ಹುಚ್ಚ | ಓ |
| ವೇಂಡ್ | ಹುಚ್ಚು | ವೇಂಡಿ | ಹುಚ್ಚಿ | ಇ |
| ಸಾಣ್ | ಜಾಣತನ | ಸಾಣೋ | ಜಾಣ | ಓ |

| | | | | |
|---|---|---|---|---|
| ಸಾಣ್ | ಜಾಣತನ | ಸಾಣಿ | ಜಾಣೆ | ಇ |
| ಧಣ್ | ಯಜಮಾನ | ಧಣಿ | ಯಜಮಾನ | ಓ |
| ಧಣ್ | ಯಜಮಾನ | ಧಣಿಯಾಣಿ | ಯಜಮಾನತಿ | ಯಾಣಿ |
| ನವ್ | ಹೊಸ | ನವೀನ್ | ಹೊಸಬ | (ಸ್ತ್ರಿ ಮತ್ತು ಪುರುಷರು) |
| ನವ್ | ಹೊಸ | ನವೀನ್ | ಹೊಸಬರು | (ಸ್ತ್ರೀ ಮತ್ತು ಪುರುಷ) |

'ಟ' ಪ್ರತ್ಯಯದಿಂದ

| | | | |
|---|---|---|---|
| ಲಪ್ | ಸುತ್ತು | ಲಪಟ್ | ಸುತ್ತುವಿಕೆ |
| ಕಟ್ | ಕಡಿ | ಕಾಟ್ | ಕತ್ತರಿಸು |
| ಕಪ | ಕಿಚ್ಚು | ಕಪಟ್ | ಹೊಟ್ಟೆ ಕಿಚ್ಚು |

'ಟಾ' ಪ್ರತ್ಯಯದಿಂದ

| | | | |
|---|---|---|---|
| ಅಂಗ್ | ದೇಹ | ಅಙ್ಗ್‌ಟಾ | ಹೆಬ್ಬೆರಳು |

**ನಾಮವಿಶೇಷಣಗಳು:**

ಲಂಬಾಣಿ ನಾಮ ವಿಶೇಷಣಗಳಲ್ಲಿ ಎರಡು ವಿಧ. ಅವು ಸರಳನಾಮ ವಿಶೇಷಣಗಳು ಮತ್ತು ತದ್ಧಿತನಾಮ ವಿಶೇಷಣಗಳು

**೧. ಸರಳನಾಮ ವಿಶೇಷಣಗಳು:**

ಅರ್ಥಾನುಸಾರವಾಗಿ ಇವುಗಳನ್ನು ನಾಲ್ಕು ವಿಧವಾಗಿ ವಿಂಗಡಿಸಲಾಗಿದೆ. ಅವು ಈಕೆಳಗಿನಂತೆ ನೋಡಬಹುದು.

೧.೧. ವರ್ಣನಾತ್ಮಕ ನಾಮವಿಶೇಷಣಗಳು

೧.೨. ದರ್ಶಕ ಸರ್ವನಾಮ ವಿಶೇಷಣಗಳು

೧.೩. ಪ್ರಶ್ನಾರ್ಥಕ ನಾಮ ವಿಶೇಷಣಗಳು

೧.೪. ಸಂಖ್ಯಾವಾಚಕ ನಾಮ ವಿಶೇಷಣಗಳು

**೧.೧. ವರ್ಣನಾತ್ಮಕ ನಾಮವಿಶೇಷಣಗಳು**

**ಉದಾಹರಣೆಗೆ:**

| | | | |
|---|---|---|---|
| ಮೊಟೋ | ದೊಡ್ಡ | ಮೊಟೋ + ಝಾಡ್ | ದೊಡ್ಡಮರ |
| ಮೀಟೋ | ಸಿಹಿ | ಮೀಟೋ + ಚಾ | ಸಿಹಿಚಹಾ |
| ಲಾಲೋ | ಕೆಂಪು | ಲಾಲೋ + ಶಾಯಿ | ಕೆಂಪುಶಾಯಿ |
| ಮೊಟ್ | ದೊಡ್ಡ | ಮೊಟ್ + ಯಾಡಿ | ದೊಡ್ಡಮ್ಮ |
| ನಾಣಕ್ಯ | ಸಣ್ಣ | ನಾಣಕ್ಯ + ಛೋರ್ | ಸಣ್ಣಮಗು |
| ಗೋಳ್ | ಗುಂಡು | ಗೋಳ್ + ಬಾಟಾ | ಗುಂಡ್ಕಲ್ಲು |

| | | | |
|---|---|---|---|
| ಧೋಳ್ | ಬಿಳಿ | ಧೋಳ್ + ಝಿಗಲಾ | ಬಿಳಿಅಂಗಿ |
| ಕಾಳೋ | ಕಪ್ಪು | ಕಾಳೋ + ರಂಗ | ಕಪ್ಪು ಬಣ್ಣ |
| ಆಚೋ | ಒಳ್ಳೆಯ | ಆಚೋ + ದೂದ್ | ಒಳ್ಳೆಯ ಹಾಲು |

**೧.೨.ದರ್ಶಕ ಸರ್ವನಾಮ ವಿಶೇಷಣಗಳು:**

**ಉದಾಹರಣೆಗೆ:** **'ವೂ'** **'ಈ'**

'ವೂ'

| | |
|---|---|
| ವೂ | ಆ |
| ವೂ ಬದಣಾ | ಆ ಹಗ್ಗ |

'ಈ'

| | |
|---|---|
| ವೂ ಬದಣಾ | ಆ ಹಗ್ಗಗಳು |
| ಈ | ಈ |
| ಬಳದ್ | ಎತ್ತು |
| ಈ ಬಳದ್ | ಈ ಎತ್ತುಗಳು |
| ವೂ | ಅದು |
| ವೂ ಕುರ್ಚಿ | ಅದು ಕುರ್ಚಿ |
| ಈ | ಇದು |
| ಈ ಪುಸ್ತಕ್ | ಈ ಪುಸ್ತಕ |

**೧.೩.ಪ್ರಶ್ನಾರ್ಥಕ ನಾಮ ವಿಶೇಷಣಗಳು:**

**ಉದಾಹರಣೆಗೆ :**

| | |
|---|---|
| ಕೂಣಸೋ | ಯಾವುದು |
| ಕೂಣಸೋಛೋರಾ | ಯಾವ ಹುಡುಗ |
| ಕಾಂಯಿ | ಏನು |
| ಕಾಂಯಿಚಾವ್ | ಏನು ಬೇಕು |
| ಕೇರೋ | ಯಾರದು |
| ಕೇರೋಬಳದ್ | ಯಾರದು ಎತ್ತು |

**೧.೪. ಸಂಖ್ಯಾವಾಚಕ ನಾಮ ವಿಶೇಷಣಗಳು**

**ಉದಾಹರಣೆಗೆ:**

| | |
|---|---|
| ಏಕ್ | ಒಂದು |
| ಏಕ್‌ಕೇಳಾ | ಒಂದು ಬಾಳೆಹಣ್ಣು |

| | |
|---|---|
| ದೀ | ಎರಡು |
| ದೀ ಸಿಬ್ಬಿ | ಎರಡು ಬೆಕ್ಕುಗಳು |
| ತೀನ್ | ಮೂರು |
| ತೀನ್‌ಭೇಸಿ | ಮೂರು ಎಮ್ಮೆಗಳು |
| ಚಾರ್ | ನಾಲ್ಕು |
| ಚಾರ್‌ಟಾಂಗೆ | ನಾಲ್ಕು ಕಾಲುಗಳು |

೨. ತದ್ಧಿತ ನಾಮ ವಿಶೇಷಣಗಳು

ಉದಾಹರಣೆಗೆ

| ಲಂಬಾಣಿ | ಕನ್ನಡ | ಲಂಬಾಣಿ | ಕನ್ನಡ |
|---|---|---|---|
| ವಸೋ | ಅಂಥಾ | ವಸೋ ಭೋರಾ | ಅಂಥ ಹುಡುಗ |
| ಅಸೋ | ಇಂಥಾ | ಅಸೋಢೋರ್ | ಇಂಥಾ ದನ |
| ಕತರಾ | ಎಷ್ಟು | ಕತರಾ ಚಾವ್ | ಎಷ್ಟುಬೇಕು |
| ಅತರಾ | ಅಷ್ಟು | ಅತರಾ ದೂದ್ | ಅಷ್ಟುಹಾಲು |
| ಏತರಾ | ಇಷ್ಟು | ಏತರಾ ದಳಿಯಾಮತ್ | ಇಷ್ಟುಅನ್ನಬೇಡ |

೨.೧. ಭೂತ ನಾಮ ವಿಶೇಷಣ ರೂಪಗಳು

ಉದಾಹರಣೆಗೆ:

| | |
|---|---|
| ವೂ ಲಾಯೀ ಜೋ ಪಿಸಾ | ಅವಳು/ಅವಳು ತಂದ ಹಣ |
| ವೂ ಕೀದೊ ಜೋ ಕಾಮ್ | ಅವರು ಮಾಡಿದ ಕೆಲಸ |
| ಈ ಮಾರೋ ಜೋ ಸಿಬ್ಬಿ | ಇದು ಕೊಂದ ಬೆಕ್ಕು |

೨.೨. ಅಭೂತ ನಾಮ ವಿಶೇಷಣ ರೂಪಗಳು

ಉದಾಹರಣೆಗೆ:

| | |
|---|---|
| ಮ ಪೀ ಜೋ ಪಾಣಿ | ನಾನು ಕುಡಿಯುವ ನೀರು |
| ವೂ ಜಾ ಜೋ ಸಾಲಿ | ಅವಳು ಹೋಗುವ ಶಾಲೆ |
| ವೂ ಲಕ ಜೋ ಕಾಗದ್ | ಅವಳ ಬರೆಯುವ ಕಾಗದ |



## ಅಧ್ಯಾಯ - ೯

# ಲಂಬಾಣಿಭಾಷೆ: ಕನ್ನಡ ಭಾಷೆಯ ಪ್ರಭಾವ

ಕನ್ನಡ ಭಾಷೆಗೆ ಎರಡು ಸಾವಿರಕ್ಕಿಂತಲೂ ಪುರಾತನ ಇತಿಹಾಸವಿದೆ. ಲಂಬಾಣಿಗರು ಸುಮಾರು ೨೦೦ ವರ್ಷಗಳಿಂದಲೂ ಕನ್ನಡಿಗರ ಜೊತೆಯಲ್ಲಿ ವಾಸವಾಗಿದ್ದಾರೆ. ದೈನಂದಿನ ವ್ಯವಹಾರ ಹಾಗೂ ನಿತ್ಯ ಸಂವಹನ ಸಂಪರ್ಕದಿಂದ ಲಂಬಾಣಿಗರ ಭಾಷೆಯ ಮೇಲೆ ಕನ್ನಡಿಗರ ಪ್ರಭಾವ ಅಧಿಕ ಪ್ರಮಾಣದಲ್ಲಿ ಕಂಡುಬರುತ್ತದೆ. ಯಾವುದೇ ಸಮುದಾಯ ತಮ್ಮ ಮೂಲ ಸ್ಥಾನವನ್ನು ತ್ಯಜಿಸಿ ಬೇರೆ ಪ್ರದೇಶಗಳಲ್ಲಿ ಹೋಗಿ ಸ್ಥಿರವಾಗಿಬಿಡುತ್ತದೆ. ಯಾವುದೇ ಸಮುದಾಯ ತಮ್ಮ ಮೂಲ ಸ್ಥಾನದ ಸಂಪರ್ಕವನ್ನು ಕಡಿದು ಕೊಳ್ಳುವುದರಿಂದ ಆ ಸಮುದಾಯದ ಮೇಲೆ ಸ್ಥಳೀಯ ಭಾಷೆ ಮತ್ತು ಸಂಸ್ಕೃತಿಯ ಪ್ರಭಾವ ಸಹಜವಾಗಿರುತ್ತದೆ. ಲಂಬಾಣಿಗರು ತಮ್ಮ ಮೂಲ ಸ್ಥಾನವನ್ನು ಬಿಟ್ಟು ಅಲೆಮಾರಿಗಳಾಗಿ ಒಂದು ವೃತ್ತಿಯನ್ನು ಆಯ್ಕೆಮಾಡಿಕೊಂಡು ತಂಡೋಪ ತಂಡವಾಗಿ ಭಾರತದುದ್ದಗಲಕ್ಕೂ ಹರಡಿಕೊಂಡು ನೆಲೆ ನಿಂತಿದ್ದಾರೆ. ದೈನಂದಿನ ವ್ಯವಹಾರ ಹಾಗೂ ನಿರಂತರ ಸಂಪರ್ಕಗಳಿಂದಾಗಿ ಆಯಾ ಪ್ರಾದೇಶಿಕ ಭಾಷೆಯ ಪ್ರಭಾವ ಉಂಟಾಗುವುದು ಅನಿವಾರ್ಯ. ಉತ್ತರ ಭಾರತದಿಂದ ದಕ್ಷಿಣಕ್ಕೆ ವಲಸೆ ಬಂದ ಲಂಬಾಣಿಗರ ಭಾಷೆಯಲ್ಲಿ ಉತ್ತರ ಭಾರತದ ಭಾಷೆಗಳೊಂದಿಗೆ ದಕ್ಷಿಣದ ಮಧ್ಯದ್ರಾವಿಡ ಭಾಷೆಗಳಾದ ಪಂಚದ್ರಾವಿಡ ಭಾಷೆಗಳು ಹೊಂದಿರುವ ಕನ್ನಡ, ತೆಲುಗು, ಮಲೆಯಾಳಂ, ತಮಿಳು, ತುಳು ಭಾಷೆಗಳು ನೋಡಬಹುದು. ಪ್ರಮುಖವಾಗಿ ಕನ್ನಡ ಭಾಷೆಯ ಪ್ರಭಾವ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ೧. ವ್ಯವಸಾಯಕ್ಕೆ ಸಂಬಂಧಿಸಿದ ಪದಗಳು

| ಕನ್ನಡ ಭಾಷೆ | ಲಂಬಾಣಿ ಭಾಷೆ |
|---|---|
| ರಾಸಿ | ರಾಸ್ |
| ಕೀಲು | ಖೀಲ್ |
| ಗಾಲಿ | ಗಾಲಿ |
| ಕಣ | ಕಣ, ಖಳೋ |

| | |
|---|---|
| ಬೀಜ | ಬೀಜಾ |
| ಹರಗು | ಹರ್‌ಗು |
| ಕುಂಟೆ | ಕುಂಟಿ, ಕುಂಟೆ |
| ನೊಗ | ನೋಗಾ |
| ರಾಡಿ | ರಾಡೀ |
| ಈಂಚು | ಯೀಂಚ್ |
| ಬಾರ್ಕೋಲು | ಬಾರ್ಕೋಲ್ |
| ಮಿಣಿ | ಮಿಣಿ |

೨. ವೃತ್ತಿಗೆ ಸಂಬಂಧಿಸಿದ ಪದಗಳು

| | |
|---|---|
| ಬಡಗಿ | ಬಡಗಿ |
| ಕಮ್ಮಾರ | ಕಮ್ಮಾರ್ |
| ಚಮ್ಮಾರ | ಚಮ್ಮಾರ್ |
| ಉಳಿ | ಉಳಿ |
| ಬಾಚಿ | ಬಾಚೀ |
| ಸುತ್ತಿಗೆ | ಸುತ್ತಿಗೆ/ಸುತ್ತಿ |
| ಕುಲುಮೆ | ಕುಲುಮೆ |
| ಗುದ್ಲಿ | ಗುದ್ಲಿ |
| ಹಾರೆ | ಹಾರ್ |
| ಕೂರಗಿ | ಕೂರಗಿ |
| ಬೇಳೆ | ಬೇಳೆ |
| ಸೇರು | ಸೇರು |
| ಕಸ | ಕಸ್ |

೩. ವ್ಯಾಪಾರಕ್ಕೆ ಸಂಬಂಧಿಸಿದ ಪದಗಳು

| | |
|---|---|
| ಸಾಲಾ | ಸಾಲಾ |
| ಅಸಲು | ಅಸಲ್ |

| | |
|---|---|
| ಬಡ್ಡಿ | ಬಡ್ಡಿ |
| ಕಂತು | ಕಂತ್ |
| ತಕ್ಕಡಿ | ತಕ್ಕಡಿ |
| ಬಾಕಿ | ಬಾಕೀ |
| ಅಂಗಡಿ | ಅಂಗ್‌ಡಿ |
| ಧರಣಿ | ಧಾರಣಿ |
| ದಲಾಲು | ದಲಾಲಿ |
| ಸವಾಲು | ಸವಾಲ್ |
| ಮಾಫು | ಮಾಫ್ |
| ಸುಂಕು | ಸಂಕ್/ಸುಂಕ್ |
| ಚೌಕಾಸಿ | ಚೋಕಾಸ್ |

೪. ತರಕಾರಿಗೆ ಸಂಬಂಧಿಸಿದ ಪದಗಳು

| | |
|---|---|
| ಹೂಕೋಸು | ಹೂಕೋಸ್ |
| ಕೊತ್ತಂಬರಿ | ಕೊತ್ಮೀರ್ |
| ಶುಂಠಿ | ಶುಂಠಿ |
| ಮೆಣಸು | ಕಾಳಿಮರ್ಚೆ, ಕಾಳಿಮಿರಿ |
| ಲವಂಗ | ಲುಂಗ್, ಲವಂಗ್ |
| ಚೌವಳೆಕಾಯಿ | ಚೌಳಿಕಾಯಿ |
| ಕೋಸುಗಡ್ಡೆ | ಕೊಸ್‌ಗಡ್ಡೆ |
| ಪುದಿನಾ | ಬುದೀನಾ, ಪುದೀನಾ |

೫. ರಾಜಕೀಯಕ್ಕೆ ಸಂಬಂಧಿಸಿದ ಪದಗಳು

| ಕನ್ನಡ ಭಾಷೆ | ಲಂಬಾಣಿ ಭಾಷೆ |
|---|---|
| ಮೆಂಬರ್/ಸದಸ್ಯ | ನೆಂಬರ್ |
| ಸರಪಂಚ್ | ಸರ್ಪಂಚ್ |
| ಎಂ.ಎಲ್.ಎ | ಯಮೇಲೆ/ಏಮ್ಲೇ |

| | |
|---|---|
| ಮುಖ್ಯಮಂತ್ರಿ | ಮುಕೇಮಂತ್ರಿ |
| ಉಪಾಧ್ಯಕ್ಷರು | ಉಪಸರಂಪಚ್ |
| ಅಧ್ಯಕ್ಷರು | ಅಧ್ಯಕ್ಷ್ಯ |
| ಮಂತ್ರಿ | ಮಾಂತ್ರಿ/ಮಂತ್ರಿ |

೬. **ಪ್ರಾಣಿ, ಪಕ್ಷಿಗಳಿಗೆ ಸಂಬಂಧಿಸಿದ ಪದಗಳು**

| | |
|---|---|
| ನಾಗರಹಾವು | ನಾಗ್‌ಸಾಪ್ |
| ವಿಷ | ವಿಷಾ |
| ನವಿಲು | ನವೀಲ್ |
| ಪಾರಿವಾಳ | ಪಾರಿವಾಳ್ |
| ಚಿರತೆ | ಚಿರತಾ |
| ಜಿಂಕೆ | ಹಣ್ಣಿ |
| ಮೊಲ | ಮೊಲಾ |
| ಎತ್ತು | ಎತ್ |
| ಆಕಳು | ಆಕಳ್ |
| ಕುರಿ | ಕುರಿ |
| ಆಡು | ಆಡ್ |
| ಹೋರಿ | ಹೋರಿ |

೭. **ಭಾವವಾಚಕ ಪದಗಳು**

| | |
|---|---|
| ಪ್ರೇಮ | ಪ್ರೇಮ್ |
| ನಿದ್ದೆ | ನಿಂದ್ |
| ದುಃಖ | ದುಃಖ್, ದಃಕ್ |
| ಸುಃಖ | ಸುಃಕ್, ಸಃಖ್ |
| ಅನುಮಾನ | ಅನ್‌ಮಾನ್ |
| ಸ್ವಾರ್ಥ | ಸ್ವಾರ್ಥ |
| ಕಾರಣ | ಕಾರಣ್, ಕಾರಣಾ |

| | |
|---|---|
| ಉದ್ದೇಶ | ಉದ್ದೇಸ್ |
| ಅಭ್ಯಾಸ | ಅಭಾಸ್ |

೮. ವಿಶೇಷಣ, ಭಾವಾರ್ಥಕ ನಾಮವಾಚಕಗಳು

| | |
|---|---|
| ಹಠಮಾರಿ | ಹಟೀಲೊ, ಹಟ್‌ಮಾರಿ |
| ಜಾಗ್ರತೆ | ಜಾಗೃತ್ |
| ಅಸಲು | ಅಸಲ್ |
| ಒಳ್ಳೆಯತನ | ಒಳ್ಳೆತನ್ |
| ಬೆಲೆ | ಮೋಲ್/ಬೆಲೆ |
| ಅಡ್ಡ | ಆಡೋ |
| ಹೊಲಸು | ಹೊಲಸ್ |
| ಭಯ | ಬುಗಲ್/ಭಯ್ |
| ದಯ | ದಯ್ |
| ಜಿಪುಣ | ಜಿಪುಣಾ |
| ತಯಾರು | ತಯಾರ್ |
| ರೂಪ | ರೂಪ್ |
| ಆಲೋಚನೆ | ಆಲೊಚನಾ |
| ಸುಸ್ತು | ಸುಸ್ತ್ |
| ಅದೃಷ್ಟ | ಅದೃಷ್ಟ್ |
| ಕಷ್ಟ | ಕಷ್ಟ್/ಕಷ್ಟಾ |
| ಸಮಾನ | ಸಮಾನ್ |
| ಧ್ಯಾನ | ಧಾನ್ |
| ಕರುಣೆ | ಕರಣ್ |
| ದಿಕ್ಕು | ದಿಕ್ಕ್ |
| ನ್ಯಾಯ | ನ್ಯಾಯಿ |
| ನಿಜ | ನಿಜಾ |

| | |
|---|---|
| ಪುಣ್ಯ | ಪುಣ್ |
| ಪಾಪ | ಪಾಪ್ |
| ದಾನ | ದಾನ್ |
| ಧರ್ಮ | ಧಾಮ್/ಧರಮ್ |

೯. ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ಪದಗಳು

| | |
|---|---|
| ಶಾಲೆ | ಸಾಲಿ |
| ಓದು | ಓದ್ |
| ಮಗ್ಗಿ | ಮಗ್ಗಿ |
| ಲೆಕ್ಕ | ಲೆಕ್ಕೋ/ಲೆಕ್ಕಿ |
| ಮೇಸ್ತ್ರು | ಮಾಸ್ತರ್/ಮೇಸ್ತ್ರೀ/ಮೇಸ್ತ್ರ |
| ಗಂಟೆ | ಗಂಟಾ, ಗಂಟಿ |
| ಪಾಟಿ | ಪಾಟಿ/ಪಾರಿ |
| ಕಾಟು | ಕಾಟ್ |
| ಗಣಿತ | ಗಣಿತ್ |
| ವಿಜ್ಞಾನ | ಇಜ್ಞಾನ್ |
| ಕಥೆ | ಕತಿ |
| ಕಾದಂಬರಿ | ಕಾಂದಬರಿ |
| ಇಂಗ್ಲೀಷ | ಇಂಗ್ಲೀಸ್, ಇಂಗ್‌ಲೀಸ್ |
| ಪಾಟೀಚೀಲ | ಪಾಟೀಚಿಲಾ |
| ಗುಣಿಸು | ಗುಣಸ್ |
| ಕೂಡಿಸು | ಕೂಡಸ್ |
| ಕಳೆ | ಕಳಿ |
| ಚರಿತ್ರೆ | ಚರಿತೆ, ಚರಿತ್ರಾ |
| ಸೊನ್ನೆ | ಸೊನ್ನಿ |
| ಬಳಪ | ಬಳಪ್, ಉಳಪಾ |

| | |
|---|---|
| ಪಾಠ | ಪಾಠ್, ಪಾಠಾ |
| ಪರೀಕ್ಷೆ | ಪರಿಕ್ಷಾ, ಪರಿಕ್ಷಾ |
| ಕಾಫಿ | ಕಾಫಿ, ಕಾಪಿ |
| ಸಾಯಿ | ಸಾಯ, ಶಾಯಿ |

೧೦. ನಿತ್ಯ ಬಳಕೆಯ ಪದಗಳು

| | |
|---|---|
| ಹಾರಿ | ಹಾರಿ |
| ಕಿಟಕಿ | ಕಿಟ್‌ಕಿ |
| ಪರದೆ | ಪರ್ದಾ, ಪದ್ರಿ, ಪರದ್ಯೋ |
| ಗೋಡೆ | ಗೊಡಾ, ಗೋಡಿ |
| ಸಿಮೆಂಟು | ಸಿಮೆಂಟ್ |
| ಬಾಗಿಲು | ಬಾಕ್ಲೋ, ಬಾಗ್ಲೋ |
| ಮಂಚ | ಮಂಚ್ಯಾ, ಮಂಚಾ |
| ಗೊಂಬೆ | ಗೊಂಬಿ |
| ಬುನಾದಿ | ಬುನಾದೀ |
| ಕಮಾನು | ಕಮಾನ್ |
| ಮೆಟ್ಟಿಲು | ಖಪ್ತಿ, ಮೆಟ್ಲು, ಛೀಡಿ |
| ತೊಟ್ಟಿ | ಬಾನಿ, ಹೊಂಡ, ತೊಟ್ಟಿ |
| ನಲ್ಲಿ | ನಳಿ |
| ಊದುಬತ್ತಿ | ಊದ್‌ಖಡ್ಡಿ, ಊದ್‌ಬತ್ತಿ |

೧೧. ಇತರ ಪದಗಳು

| | |
|---|---|
| ವಾರ | ವಾರಾ |
| ಗಡಿಯಾರ | ಗಡಿಯಾರ್,ರಾ |
| ದೇಶ | ದೇಸ್ |
| ಕಿರೀಟ | ಕಿರಿಟಾ, ಕಿರ್ಟಾ |
| ರಾಜ್ಯ | ರಾಜ್ |

| | |
|---|---|
| ಅಧಿಕಾರಿ | ಅಧಿಕಾರೀ |
| ರಾಣಿ | ರಾಣಿ |
| ಬಾಣ | ಬಾಣ್ |
| ಬೆವರು | ಬೆವರ್, ಬೆವುರ್ |
| ಸಾಕ್ಷ್ಯ | ಸಾಕ್ಷ್ಯೆ |
| ಹಬ್ಬ | ಹಬ್ಬಾ |
| ದಸರಾ | ದಸ್‌ರಾ |
| ದೀಪಾವಳಿ | ದವಾಳಿ/ದೀಪಾವಳಿ |
| ಗಣೇಶ್ ಹಬ್ಬ | ಗಣೇಶ ಹಬ್ಬಾ |
| ಇಷ್ಟ | ಇಷ್ಟಾ, ಇಸ್ಟಾ |
| ದಂಡ | ದಂಡ್ |
| ಹೌದು | ಹಾವ್ |
| ಮಸೀದು | ಮಸೀದ್, ಮಜ್ಜೀದ್ |
| ರೇಡಿಯೋ | ರೆಡಿಯೋ/ರೇಡೂ, ಟೋಪ್ರಿಕಾಡ್ |
| ಟುವಾಲ್ | ಟಾವಲ್ |
| ಟೋಪಿ | ಟೋಪಿ |
| ಹಂಚು | ಹೆಂಚ್ |
| ತಾಟು | ತಾಟ್ |
| ಹುಣ್ಣಿಮೆ | ಹುಣ್ಣಿಮೆ, ಹುನ್ನಿಮೆ |
| ಅಮಾವಸ್ಯೆ | ಅಮಾಸ್/ಅಮಾವಸ್ |
| ಹಪ್ಪಳ | ಹಪ್ಪಳಾ, ಹಪ್ಪಾ |
| ದೋಸೆ | ದೋಸಿ, ದೋಸಾ |
| ಇಡ್ಲಿ | ಇಡ್ಲಿ, ಇಟಲಿ, ಇಟ್ಲಿ |
| ಕಡಬು | ಕಡಬು |

| | |
|---|---|
| ಹೋಳಗಿ | ಹೋಳ್‌ಗಿ, ಹೋಳ್ಗೆ |
| ಚಮಚೆ/ಚಮಚಾ | ಚಮ್‌ಚ್ಯಾ |
| ಕೀಲಿ | ಕೀಲೀ |
| ಸೇರು | ಸೇರ್ |
| ಮಾಳಿಗೆ | ಮಾಳ್ಗೀ |
| ಜಂತಿ | ಜಂತಿ, ಜಂತ್ಲೀ |
| ಹಿತ್ತಲಾ | ಹಿತ್ಲಾ |
| ಚಿಲಕಾ | ಚಿಲಕಾ |
| ತೇರು | ತೇರ್ |
| ಹಂದಿ | ಹಂದಿ |
| ಹೊಟ್ಟೆಕಿಚ್ಚು | ಹೊಟ್ಟೆಕಿಚ್ |
| ಮೆರವಣಿಗೆ | ಮೆರವಣಿ |
| ಜಾತ್ರೆ | ಜಾತ್ರಾ |
| ಬಚ್ಚಲು | ಬಚ್ಚಲ್, ಬಚ್ಲಾ |
| ಚಾಡಿ | ಚಾಡಿ |
| ಚಾಕು | ಚಾಕು |
| ಮಚ್ಚು | ಮಚ್ಚು |
| ಚಪ್ಪಲು | ಚಪ್ಪಲ್ |
| ಮಾಮ | ಮಾಮಾ |
| ಗಂಗೆ | ಗಂಗಾ |
| ಕಾಶಿ | ಕಾಶಿ |
| ಆನಂದ | ಆನಂದ್ |
| ಕಸ್ತೂರಿ | ಕಸ್ತೂರಿ |
| ನಾಯಕ | ನಾಯಕ್ |

| | |
|---|---|
| ಕುಮಾರಿ | ಕುಮಾರಿ/ಕುವ್ವಾರ್ |
| ರಾಮ | ರಾಮ್ |
| ವಾರ್ತೆ | ವಾರ್ತಾ |
| ಖರ್ಚು | ಕರಚ್ |
| ವಿಚಾರ | ವಿಚಾರ್ |
| ಗೀತೆ | ಗೀತೆ, ಗೀತ್ |
| ಮೂಲಿ | ಮೂಲಿ |
| ನಾಯಿ | ನಾಯಿ |
| ಸಾಧು | ಸಾದು |
| ಸೀಸೆ | ಸೀಸಾ |
| ಕಾಗೆ | ಕಾಗಿ |
| ಧೂಳು | ದೂಳ್ |
| ದ್ರಾಕ್ಷಿ | ದ್ರಾಕ್ಷಿ |
| ಗಸಗಸೆ | ಗಸಗಸ್ |
| ವಜ್ರ | ವಜ್ರ |
| ಲಕ್ಷ್ಮಿ | ಲಕ್ಷ್ಮಿ |
| ಸರಸ್ವತಿ | ಸರಸ್ವತಿ |
| ಗೊಂಬೆ | ಗೊಂಬೆ |
| ರುಚಿ | ರುಚಿ |
| ಆಸೆ | ಆಸಾ |
| ವಿದ್ಯಾರ್ಥಿ | ವಿದ್ಯಾರ್ಥಿ |
| ಸಂಬಂಧ | ಸಂಬಂಧ್/ಸಂಮಂಧ್ |
| ವಿದ್ಯೆ | ವಿದ್ಯಾ |

| | |
|---|---|
| ರಥ | ರಥ್ |
| ಸಂಘು | ಸಂಘ್ |
| ಕಾರಣ | ಕಾರಣ್ |
| ಗುಣ | ಗುಣ್ |
| ಸ್ವಭಾವ | ಸ್ವಭಾವ್ |
| ವಂಶ | ವಂಶಾ |
| ತಪಸ್ಸು | ತಪಸ್ಸಿ/ತಪಸ್ಸ್ |
| ಗುಂಪು | ಗುಂಪ್ |
| ಧರ್ಮ | ಧರಮ್ |
| ಛತ್ರಿ | ಛತ್ರಿ |
| ಖೋಖೋ | ಖೋಖೋ |
| ಗೋಲಿ | ಗೋಲಿ |
| ಗೊಂಬೆ | ಗೊಂಬೆ |
| ಕಬ್ಬಡ್ಡಿ | ಕಬ್ಬಡಿ, ಕಬಾಡಿ |

* ಅನ್ಯದೇಶೀಯ ಪದಗಳು

| | |
|---|---|
| ಸೈಕಲು | ಸೈಕಲ್ |
| ಸ್ಕೂಲು | ಇಸ್ಕೂಲ್ |
| ಆಫೀಸು | ಆಫೀಸ್ |
| ಐಸ್‌ಕ್ರೀಮು | ಐಸ್‌ಕ್ರೀಮ್ |
| ಬ್ರೇಡ್ಡು | ಬ್ರೇಡ್ |
| ಸಿಮೆಂಟು | ಸಿಮೆಂಟ್ |
| ಪೆನ್ನು | ಪೆನ್ |
| ಪೆನ್ಸಿಲು | ಪೆನ್ಸಿಲ್ |
| ವೈಟು | ವೈಯಿಟ್ |

| | |
|---|---|
| ರೆಡ್ಡು | ರೆಡ್ |
| ಗ್ಲಾಸು | ಗೀಲಾಸ್/ಗ್ಲಾಸ್ |
| ಸ್ಲೇಟು | ಸ್ಲೇಟ್ ಸ್ಲೇಯಟ್ |
| ಕರೆಂಟು | ಕರೆಂಟ್ |
| ಫೋಟು | ಫೋಟೋ |
| ಚೈನು | ಚೈನ್ |
| ಪೇಪರು | ಪೇಪರ್ |
| ನೋಟು | ನೋಟ್ |
| ಟೀಚರು | ಟೀಚರ್ |
| ಕಾರು | ಕಾರ್ |
| ಬಸ್ಸು | ಬಸ್ಸ್ |
| ಜೀಪು | ಜೀಬ್/ಜೀಪ್ |
| ಮೋಟಾರು | ಮೋಟರ್ |
| ಸ್ಕೂಟರು | ಸ್ಕೂಟರ್ |
| ವ್ಯಾನು | ವ್ಯಾನ್ |
| ಡ್ರಿಂಕು | ಡ್ರಿಂಕ್ |
| ಶರ್ಟು | ಶರಟ್ |
| ಪ್ಯಾಂಟು | ಪ್ಯಾಂಟ್ |
| ಬನೀನು | ಬನಿನ್ |
| ರಿಬ್ಬನ್ನು | ರಿಬ್ಬಿನ್ |
| ವಾಚು | ವಾಚ್ |
| ಹೋಟಲು | ಹೋಟಲ್ |
| ಲೈಟು | ಲೈಟ್ |
| ರಬ್ಬರು | ರಬರ್ |

| | |
|---|---|
| ಟ್ಯೂಬು | ಟ್ಯೂಬ್‌ಲೈಟ್ |
| ಸೂಟಕೇಸು | ಸೂಟಕೇಸ್ |
| ಕಂಪಾಸು | ಕಂಪಾಸ್ |
| ಬಾಕ್ಸು | ಬಾಕಸ್ |
| ಸ್ಕೇಲು | ಸ್ಕೇಲ್ |
| ಮೆಂಡರು | ಮೆಂಡರ್ |
| ಇಂಗ್ಲೀಷ | ಇಂಗ್ಲೀಸ್ |
| ಬಿಸ್ಕೇಟು | ಬಿಸ್ಕೇಟ್ |
| ಪಾಲೀಶು | ಪಾಲೀಸ್ |
| ಪ್ಲಾಸ್ಟಿಕು | ಪ್ಲಾಸ್ಟಿಕ್ |
| ಬಕೀಟು | ಬಕೀಟ್ |
| ಸೋಪು | ಸೋಪ್ |
| ಬುಕ್ಕು | ಬುಕ್ಕಾ |
| ಬ್ರ್ಯಾಸ್‌ಲೈಟು | ಬ್ರ್ಯಾಸ್‌ಲೈಟ್ |
| ಜಗ್ಗು | ಜಗ್ಗ್ |
| ಬೂಟು | ಬೂಟ್ |
| ಬ್ಯಾಗು | ಬ್ಯಾಗ್ |
| ಪೈಪು | ಪೈಪ್ |
| ಪ್ಯಾಡು | ಪ್ಯಾಡ್ |
| ಮೀಟರು | ಮೀಟರ್ |
| ಚೇರು | ಚೇರ್ |
| ಟೇಬಲ್ | ಟೇಬಲ್ |
| ಸ್ವಿಚ್ಚು | ಸ್ವಿಚ್ |
| ಕ್ಲಿಪ್ಪು | ಕ್ಲಿಪ್ |

| | |
|---|---|
| ಸ್ಲಿಪ್ಪರು | ಸಿಲ್ಪರ್ |
| ಬ್ಯಾಂಕು | ಬೇಂಕ್ |
| ಪೋಸ್ಟು | ಪೋಸ್ಟ್ |
| ರಿಂಗು | ರಿಂಗ್ |
| ಕ್ಯಾಪು | ಕ್ಯಾಪ್/ಕಾಪ್ |
| ಸ್ಪ್ರಿಂಗು | ಇಸ್ಪೇರಿಂಗ್ |
| ವಯರು | ವಯರ್ |
| ಗೇಟು | ಗೇಟ್ |
| ಪಾರ್ಕು | ಪಾರ್ಕ್ |
| ಗಾರ್ಡನು | ಗಾರ್ಡನ್ |
| ಸೀಟು | ಸೀಟ್/ಶೀಟ್ |
| ಲಾಸ್ಟು | ಲಾಸ್ಟೇನ್ |
| ಫಸ್ಟು | ಫಸ್ಟೇನ್ |
| ಸೆಕೆಂಡು | ಸೆಕೆಂಡ್ |
| ರೈಲು | ರೇಲ |
| ಬಲ್ಬು | ಬಲಪ |
| ಕ್ಲಾಸು | ಕಲಾಸ್ |
| ರೂಮ್ | ರೂಮ್ |
| ರೋಡು | ರೋಡ್ |
| ಬ್ಯಾಟು | ಬ್ಯಾಟ್ |
| ಬಾಲ್ | ಬಾಲ್ |
| ನಿಬ್ಬು | ನಿಬ್ |
| ಟಯರು | ಟಯರ್ |
| ಅರ್ಜೆಂಟು | ಅರ್ಜೆಂಟ್ |

| | |
|---|---|
| ಸಲೆಕ್ಷನ್ನು | ಸಲೆಕ್ಸನ್ |
| ಟೈಮು | ಟೈಮ್/ಟೇಮ್ |
| ಹೈಟು | ಹೈಟ್/ಹೈಯಿಟ್ |
| ಇಂಕು | ಇಂಕ್ |
| ಬ್ಲಾಕ್ | ಬ್ಲಾಕ್ |
| ಬಿಲ್ಲು | ಬಿಲ್ಲ್ |
| ಫ್ಯಾನು | ಫ್ಯಾನ್ |
| ಸ್ಟೈಲ್ | ಇಸ್ಟಾಯಿಲ್ |
| ಐರನ್ | ಏರನ್ |
| ಅಂಕಲ್ | ಅಂಕಲ್ |
| ಆಂಟಿ | ಆಂಟಿ |
| ಗ್ರಾಮರ್ | ಗಾಮರ್ |
| ಗಮ್ಮು | ಗಮ್ |
| ಗ್ಯಾಸ್ | ಗ್ಯಾಸ್ |
| ಸ್ಟೌವು | ಈಸ್ಟೂ |
| ಡೌಟು | ಡವಟ್ |
| ಚಿಕನು | ಚಿಕನ್ |
| ಬೆಲ್ಟ್ | ಬೆಲ್ಟು |
| ಸೆಲ್ಲು | ಸೆಲ್ |
| ಚಾಕಲೇಟು | ಚಾಕ್ಲೇಟ್ |
| ಕೇಕು | ಕೇಕ್ |
| ಮದರ್ | ಮದರ್ |
| ಫಾದರ್ | ಫಾದರ್ |

| | |
|---|---|
| ಬ್ರದರ್ | ಬ್ರದರ್ |
| ಸಿಸ್ಟರ್ | ಸಿಸ್ಟರ್ |
| ಪ್ಯಾಕೇಟು | ಪಾಕೇಟ್/ಪಾಕೀಟ್ |
| ಕಮಾನು | ಕಮಾನ್ |
| ಆ್ಯಪಲ್ಲು | ಆಪಲ್ |
| ಮ್ಯಾರೇಜು | ಮ್ಯಾರೆಜ್ |
| ಲಿಸ್ಟು | ಲೀಸ್ಟ್ |
| ಗ್ರೂಫ್ | ಗ್ರೂಫ್ |
| ಬೆಸ್ಟು | ಬೇಸ್ಟ್ |
| ಕ್ಲೀಯರ್ | ಕಿಲಿಯರ್ |
| ಆಡ್ಜಸ್ಟ್ | ಅಡಜಸ್ಟ್ |
| ಪಾಸು | ಪಾಸ್ |
| ರಿಜೆಲ್ಟು | ರಿಜಲ್ಟ್ |
| ಔಟು | ಅವಟ್ |
| ಗೇಮು | ಗೇಮ್ |
| ಸ್ವೀಟು | ಸೀವಿಟ |
| ಬೆಂಚು | ಬೆಂಚ್ |
| ಬ್ಯಾಂಡೇಜು | ಬ್ಯಾಂಡೇಜ್, ಬ್ಯಾಂಡೀಜ್ |
| ಮ್ಯಾಟರು | ಮೇಟರ್ |
| ಪಾಲಿಸ್ಟರು | ಪಾಲಿಸ್ಟರ್ |
| ಡ್ರೆಸ್ಸು | ಡರೇಸ್ |
| ಕ್ಯಾಲೆಂಡರ್ | ಕ್ಯಾಲೆಂಡರ್, ಕಾಲಿಂಡರ್ |
| ಟೇಪು | ಟೇಪ್ |
| ಟ್ಯಾಬಲೇಟು | ಟ್ಯಾಬಲೇಟ್ |

| | |
|---|---|
| ಇಂಜೆಕ್ಷನ್ | ಇಂಜಕ್ಷನ್, ಇಂಜೀಸನ್ |
| ಕಾರ್ಡು | ಕಾರಡ್/ಕಾರಟ್ |
| ಮಾರ್ಕ್ಸು | ಮಾರಕ್ |
| ಲೀಡರ್ | ಲೀಡರ್ |
| ಬಕೀಟು | ಬಕೀಟ್ |
| ಮಟನು | ಮಟನ್ |

ಇಂತಹ ಅನೇಕ ಕನ್ನಡ ಪದಗಳು ಅಥವಾ ಕನ್ನಡದಲ್ಲಿ ಪ್ರಯೋಗವಾಗುವ ಅನ್ಯ ಭಾಷೆಯ ಪದಗಳು ಅದೇ ಮಾದರಿಯಲ್ಲಿ ಬಳಕೆಯಾಗಿರುವುದನ್ನು ಕಾಣಬಹುದು. ''ಲಂಬಾಣಿ ಭಾಷೆಯ ಮೇಲೆ ಕನ್ನಡ ಭಾಷೆಯ ಪ್ರಭಾವ ಗಮನಿಸಿದರೆ ಅಲ್ಲಿಯ ಕೋಶಕ್ಕೆ ಕನ್ನಡದಿಂದ ಅನೇಕ ನಿತ್ಯೋಪಯೋಗಿ ಪದಗಳೂ ಹೋಗಿ ಸೇರಿಕೊಂಡಿವೆ. ಒಂದು ಭಾಷೆ ಸಾಮಾನ್ಯವಾಗಿ ಇನ್ನೊಂದು ಭಾಷೆಯಿಂದ ಸಾಂಸ್ಕೃತಿಕ ಪದಗಳನ್ನು (Cultural Words) ಸ್ವೀಕರಿಸುವುದೇ ಹೊರತು, ನಿತ್ಯೋಪಯೋಗಿ ಪದಗಳನ್ನು ಸ್ವೀಕರಿಸುವುದಿಲ್ಲ. ಆದರೆ ಒಂದು ಭಾಷೆಯ ಮೇಲೆ ಇನ್ನೊಂದು ಭಾಷೆಯ ಪ್ರಭಾವ ಅತಿಯಾದಾಗ ಹೀಗಾಗುವುದುಂಟು.'' (ಚಿದಾನಂದ ಮೂರ್ತಿ: ೧೯೭೦-೧೫) ಹೀಗೆ ಕನ್ನಡ ಪದಗಳು ಸಾಂಸ್ಕೃತಿಕವಾಗಿ ಲಂಬಾಣಿ ಭಾಷೆ ಮೇಲೆ ಪ್ರಭಾವ ಬೀರುವುದು ಕಂಡುಬರುತ್ತದೆ.

ಒಟ್ಟಿನಲ್ಲಿ ಕರ್ನಾಟಕದಲ್ಲಿ ವಾಸವಾಗಿರುವ ಲಂಬಾಣಿಗರಿಗೆ ಭಾರತೀಯ ಅಷ್ಟೇ ಅಲ್ಲ ಅಂತರಾಷ್ಟ್ರೀಯ ಸಾಂಸ್ಕೃತಿಕ ಜಗತ್ತಿನ ಪರಿಚಯ ಮತ್ತು ಸಂಪರ್ಕ ಜೋಡಿಸುವಲ್ಲಿ ಕನ್ನಡದ ಪಾತ್ರ ಹಿರಿದಾದದ್ದು ಎನ್ನುವುದರಲ್ಲಿ ಎರಡುಮಾತಿಲ್ಲ.

■

## ಅಧ್ಯಾಯ - ೧೦

# ಲಂಬಾಣಿಭಾಷೆ : ತೆಲುಗು ಭಾಷೆಯ ಪ್ರಭಾವ

ತೆಲುಗು ಆಂಧ್ರಪ್ರದೇಶದ ರಾಜ್ಯ ಭಾಷೆಯಾಗಿದೆ. ದ್ರಾವಿಡ ಭಾಷಾಪರಿವಾರದಲ್ಲಿಯೇ ತೆಲುಗು ಭಾಷೆ ಮಧ್ಯ ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ ಭಾಷೆಯಾಗಿದೆ. ಮೊಗಲರು ಸುದೀರ್ಘವಾಗಿ ಆಡಳಿತ ನಡೆಸಿದ್ದುದರಿಂದ ಆಗಿನ ರಾಜ್ಯ ಭಾಷೆ ಉರ್ದು ಆಗಿರುವುದರಿಂದ ಉರ್ದುವಿನ ಪ್ರಭಾವ ಸಹಜವಾಗಿಯೇ ತೆಲುಗು ಭಾಷೆ ಮೇಲಾಯಿತು. ತೆಲಂಗಾಣ ಪ್ರದೇಶದಲ್ಲಿಯೂ ಉರ್ದು ಭಾಷೆಯ ಪ್ರಭಾವ ಹೆಚ್ಚಾಗಿದೆ. ತೆಲುಗಿನ ವರ್ಣವ್ಯವಸ್ಥೆ ಸ್ವಲ್ಪ ಹೆಚ್ಚು ಕಡಿಮೆ ಇತರ ದ್ರಾವಿಡ ಭಾಷೆಗಳಂತಯೇ ಇದೆ. ಲಂಬಾಣಿಗರು ಕರ್ನಾಟಕ್ಕಿಂತಲೂ ಆಂಧ್ರಪ್ರದೇಶದಲ್ಲಿ ಅಧಿಕ ಪ್ರಮಾಣದಲ್ಲಿ ನೆಲೆಸಿರುವುದು ಕಂಡುಬರುತ್ತದೆ. ಭಾರತದ ಜನಗಣತಿವರದಿಯ ಮೇರೆಗೆ ಲಂಬಾಣಿಗರ ಜನಸಂಖ್ಯೆ ಕರ್ನಾಟಕ್ಕಿಂತಲೂ ಆಂಧ್ರಪ್ರದೇಶದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಇರುವುದು ತಿಳಿದುಬರುತ್ತದೆ. ಈ ಪ್ರಾಂತ್ಯದಲ್ಲಿ ವಾಸಿಸುವ ಲಂಬಾಣಿಗಳಿಗೆ ಸುಕಾಳಿ, ಸುಗಾಲಿ, ಲಂಬಾಡಿ, ಬಂಜಾರಾ, ಗೋರ್, ಮಥುರಾ, ಢಾಡಿ, ಸನಾರ್, ಢಾಲಿಯಾ, ಎಂಬ ಹೆಸರುಗಳಿಂದ ಕರೆಯುತ್ತಾರೆ. ಆಂಧ್ರಪ್ರದೇಶದಲ್ಲಿ ಲಂಬಾಣಿ ಸಮುದಾಯ ಆಡುವ ಭಾಷೆ ಸುಗಾಲಿ ಭಾಷೆ ಎಂದು ಕರೆಯುವುದು ವಾಡಿಕೆ. ಲಂಬಾಣಿಗರನ್ನು 'ಸುಗಾಲಿ' ಎಂದೂ ಹೆಚ್ಚಾಗಿ ಕರೆಯುತ್ತಾರೆ. ಲಂಬಾಣಿಭಾಷೆಗೆ ತೆಲುಗು ಪ್ರದೇಶದಲ್ಲಿ ಸು. ೨೦೦ ವರ್ಷಗಳ ಇತಿಹಾಸವಿದೆ. ಸಿಂದ್ ಹಾಗೂ ಬಲೂಚಿಸ್ತಾನಗಳಿಂದ ರಾಜಸ್ತಾನ ಪವಾಡ ಪ್ರದೇಶಕ್ಕೆ ಪಸರಿಸಿದ ಲಂಬಾಣಿಗರು, ನಂತರ ಮಾಳವಾ ಮುಖಾಂತರವಾಗಿ ಹೊರಟು, ಕ್ರಮೇಣ ಭಾರತದ ತುಂಬೆಲ್ಲಾ ಪಸರಿಸತೊಡಗಿದರು. ಇವರ ಸಾಹಸ ಮತ್ತು ಪ್ರಾಮಾಣಿಕತೆಗಳಿಗೆ ಮಾರುಹೋದ ಮೊಗಲರು ಇವರಲ್ಲಿ ಎಷ್ಟೋ ಜನರನ್ನು ತಮ್ಮ ಸೈನ್ಯಕ್ಕೆ ಆಹಾರ ಧಾನ್ಯಗಳನ್ನು ಪೂರೈಸಲು ನೇಮಿಸಿಕೊಂಡರು.

೧೬೩೦ ರ ಸುಮಾರಿಗೆ ಶಾಹಾಜಾನನ ಕಾಲದಲ್ಲಿ ಅವನ ವಜೀರ್ ಅಸಫ್‌ಖಾನ್‌ನು ದಕ್ಷಿಣ ವಿಜಾಪುರದ ಅದಿಲ್ ಶಾಹಿಯ ಮೇಲೆ ಆಕ್ರಮಣ ಮಾಡಲು ಬಂದಾಗ ಅವನ ಸೈನ್ಯದೊಂದಿಗೆ ಲಂಬಾಣಿಗರು ಬಹುದೂರದ ಪ್ರದೇಶದಲ್ಲಿ ಹೋರಾಡುತ್ತಿದ್ದ ಸೈನ್ಯಗಳಿಗೆ ನಿರ್ಭಯವಾಗಿ ಆಹಾರ ಸಾಮಗ್ರಿಗಳನ್ನು ಸರಬರಾಜು ಮಾಡುತಿದ್ದರು. ಕಾಲಾವಧಿಯಲ್ಲಿ ಅಸಫ್‌ಖಾನ್ ಜತೆಗೆ ಬಂದ ಲಂಬಾಣಿಗರ ನಾಯಕ ಜಂಗಿಯ ಬಳಿ ೧,೮೦,೦೦೦ ಲಕ್ಷದ ಎಂಬತ್ತು ಸಾವಿರ ಜಾನುವಾರಗಳಿದ್ದವು ಎಂದು ಕಂಬವೇಜ್ ರವರು ಉಲ್ಲೇಖಿಸಿದ್ದಾರೆ. ಸಂಚಾರದ ಸಮಯದಲ್ಲಿ

ಜಂಗಿ-ಭಂಗಿ ನಾಯಕರು ದನಕರುಗಳಿಗೆ ಮೇವು ಹಾಗೂ ನೀರಿನ ತೊಂದರೆ ಉಂಟಾದಾಗ ಅಸಫ್‌ಖಾನ್‌ನ ಹತ್ತಿರ ಕೆಲವು ಸೌಲಭ್ಯಗಳನ್ನು ಕೇಳಿದರು. ಆಗ ಜಂಗಿ-ಭಂಗಿಗಳ ಸೇವೆಯಿಂದ ಸಾಕಷ್ಟು ಸಂತೃಪ್ತನಾಗಿರುವ ಅಸಫ್‌ಖಾನ್‌ನು ಅವರಿಗೆ ಸುವರ್ಣಾಕ್ಷರಗಳಿಂದ ಮುದ್ರಿತವಾದ ತಾಮ್ರ ಪಟದ ಮೇಲೆ ಅಧಿಕಾರವನ್ನು ಬರೆದು ನೀಡಿದ್ದಾರೆ. ಅದು ಹೀಗಿದೆ.

ರಂಜನ್ ಶಾಪಾನಿ

ಛಪ್ಪರ್ ಕಾ ಘಾಸ್

ದಿವೆಕೆ ತೀನ್ ಖೂನ್ ಮಾಫ್

ವಹಾ ಜಂಗಿ ಭಂಗಿ ಕೆ ಬೈಲ್ ಖಡೆ

ಬಂಜಾರಾಗಳೇ ನಿಮಗೆ ನೀರಿನ ಕೊರತೆಯಾದಲ್ಲಿ ಸರದಾರರ ಮನೆಯಲ್ಲಿರುವ ರಂಜಿಣಗೆಯಲ್ಲಿ ತುಂಬಿರುವ ನೀರನ್ನು ಉಪಯೋಗಿಸಿ ಕೊಳ್ಳಬಹುದು. ದನಕರುಗಳಿಗೆ ಮೇವಿನ ತೊಂದರೆಯಾದಲ್ಲಿ ಊರಿನ ಗುಡುಸಿಲುಗಳ ಮೇಲೆ ಹೊದಿಸಿರುವ ಹುಲ್ಲಿನ ಮೆದೆಗಳನ್ನು ಪಡೆಯಬಹುದು. ಅಲ್ಲದೆ ಸೈನ್ಯಕ್ಕೆ ಆಹಾರ ಸಾಮಗ್ರಿಗಳನ್ನು ಪೂರೈಸುವಾಗ ಏನಾದರು ಅಡೆತಡೆಗಳು ಉಂಟಾದಲ್ಲಿ ಅದನ್ನು ನಿವಾರಿಸಿಕೊಳ್ಳುವಾಗ ದಿನಕ್ಕೆ ಮೂರುಕೊಲೆ ಮಾಡಿದರು ಕ್ಷಮೆ ಇದೆ. ಎಲ್ಲಲ್ಲಿ ಅಸಫ್‌ಖಾನ್‌ನ ಕುದರೆಗಳಿರುತ್ತವೆಯೋ ಅಲ್ಲಲ್ಲಿ ಜಂಗಿ-ಭಂಗಿ ನಾಯಕರ ಎತ್ತುಗಳಿರಬೇಕು.''[೧]

ಈ ರಾಜಮುದ್ರೆಯು ಅಸಫ್‌ಖಾನ್‌ನ ಸೈನ್ಯಕ್ಕೆ ಆಹಾರ ಧಾನ್ಯಗಳನ್ನು ಬೇಕು ಬೇಡಿಕೆಗಳ್ನು ಪೂರೈಸುವಲ್ಲಿ ಬಂಜಾರಾಗಳು ವಹಿಸುತ್ತಿದ್ದ ಪಾತ್ರ ಹಾಗೂ ಅವರ ಬಗೆಗಿರುವ ನವಾಬನ ಪ್ರೀತಿ ಹಾಗೂ ವಿಶ್ವಾಸ ವ್ಯಕ್ತಪಡಿಸುತ್ತದೆ. ಈ ಸುದೀರ್ಘ ಇತಿಹಾಸದಲ್ಲಿ ಪ್ರಾದೇಶಿಕ ಭಾಷೆಯ ಪ್ರಭಾವ ಲಂಬಾಣಿ ಭಾಷೆ ಮೇಲೆ ಉಂಟಾಗುವುದು ಅನಿವಾರ್ಯ. ಇದನ್ನು ಭೌಗೋಳಿಕ, ಚಾರಿತ್ರಿಕ, ಸಾಮಾಜಿಕ, ರಾಜಕೀಯ, ಸಾಹಿತ್ಯ, ಸಾಂಸ್ಕೃತಿಕ, ನೆಲೆಗಳಲ್ಲಿ ಗುರುತಿಸಬಹುದಾಗಿದೆ. ನಿತ್ಯ ಜೀವನದಲ್ಲಿಲಂಬಾಣಿಗರು ತಮ್ಮ ಭಾಷೆಯಲ್ಲಿ ಅನೇಕ ತೆಲುಗು ಪದಗಳನ್ನು ತಮ್ಮದೇ ಭಾಷೆಯ ಪದಗಳಂತೆ ಪ್ರಯೋಗಿಸಿರುವುದು ಕಂಡುಬರುತ್ತದೆ. ಮುಖ್ಯವಾಗಿ ಆಟ, ಪ್ರಾಣಿ, ಪಕ್ಷಿ ಹಾಗೂ ಇತರ ಜೀವಿಗಳು, ವಿದ್ಯೆ, ವೃತ್ತಿ, ತರಕಾರಿ, ವಾಹನ, ರಾಜಕೀಯ, ಪ್ರಾಕೃತಿಕ, ಸಂಬಂಧವಾಚಕ, ಶಾರೀರಿಕ, ಗೃಹ, ಭಾವವಾಚಕ, ವಿಶೇಣ ಸಂಬಂಧವಾಚಕಗಳಿಗೆ ಸಂಬಂಧಿಸಿದಂತೆ ತೆಲುಗು ಭಾಷೆಯ ಪದಗಳು ಲಂಬಾಣಿ ಭಾಷೆಯಲ್ಲಿ ಹೇರಳವಾಗಿ ಕಂಡುಬರುತ್ತವೆ. ಪ್ರಸ್ತುತ ಅಧ್ಯಾಯದಲ್ಲಿ ಅವುಗಳನ್ನು ಚರ್ಚಿಸಲಾಗಿದೆ.

**೧. ಆಟಕ್ಕೆ ಸಂಬಂಧಿಸಿದ ಪದಗಳು**

| ಲಂಬಾಣಿ ಭಾಷೆ | ತೆಲುಗು ಭಾಷೆ | ಕನ್ನಡಭಾಷೆ |
|---|---|---|
| ಕಬಾಡಿ | ಕಬಡ್ಡಿ | ಕಬ್ಬಡ್ಡಿ |
| ಬೊಮ್ಮು | ಬೊಮ್ಮು | ಗೊಂಬೆ |

| | | |
|---|---|---|
| ಚಂಡು/ಬಂತಿ | ಚಂಡು | ಚಂಡು |
| ಕೊಲಾಟಂ | ಕೊಲಾಟಂ | ಕೋಲಾಟ |
| ಗೋಲಿ | ಗೋಲಿ | ಗೋಲಿ |

೨. ಪ್ರಾಣಿಗಳಿಗೆ ಸಂಬಂಧಿಸಿದ ಪದಗಳು

| | | |
|---|---|---|
| ಗೋರ್ಲಿ | ಗೊರ್ರೆ | ಕುರಿ |
| ಪುಲಿ | ಪುಲಿ | ಹುಲಿ |
| ಮುಂಗಷ | ಮುಂಗಿಸ | ಮುಂಗಲಿ |
| ಬೇಂಸಿ | ಬರ್ರೆ | ಎಮ್ಮೆ |

೩. ಕೀಟ ಮತ್ತು ಪಕ್ಷಿಗಳಿಗೆ ಸಂಬಂಧಿಸಿದ ಪದಗಳು

| | | |
|---|---|---|
| ಕೊಂಗ | ಕೊಂಗ | ಕೊಕ್ಕರೆ |
| ಚಿಲ್ಕಾ | ಚಿಲಕ | ಗಿಳಿ |
| ಕಾಕ್ಲ | ಕಾಕಿ | ಕಾಗೆ |
| ಕೊಬಲ್ | ಕೊಕಿಲ | ಕೋಗಿಲೆ |
| ನಾಗ್ ಸಾಪ್ | ನಾಗ್ ಪಾವು | ನಾಗರಹಾವು |
| ವಿಷಂ | ವಿಷಂ | ವಿಷ |
| ಪಿಟ್ಟ | ಪಿಟ್ಟ | ಹಕ್ಕಿ |
| ನೆಮಲಿ | ನೆಮಲಿ | ನವಿಲು |
| ಕುಕ್ಕಡಿ | ಕೋಡಿ | ಕೋಳಿ |
| ರಾಮಚಿಲ್ಕಾ | ರಾಮಚಿಲಕ | ರಾಮಗಿಳಿ |
| ಪಾವುರಂ | ಪಾವುರಂ | ಪಾರಿವಾಳ |
| ಪಲ್ಲಿ | ಪಲ್ಲಿ | ಹಲ್ಲಿ |

೪. ವ್ಯವಸಾಯ ಸಂಬಂಧಿಸಿದ ಪದಗಳು

| | | |
|---|---|---|
| ಕಾಲ್ವ | ಕಾಲವ | ಕಾಲುವೆ |
| ನಾಗರ್ | ನಾಗಲಿ | ನೇಗಿಲು |
| ಕರ್ | ಕರ್ರ | ಕಟ್ಟಿಗೆ |

| | | |
|---|---|---|
| ನಾಗರ್ ಚಿಪ್ಪು | ನಾಗಲಿ ಚಿಪ್ಪು | ನೆಗಿಲ ನಾಲಿಗೆ |
| ಬಂಡಿ | ಬಂಡಿ | ಗಾಡಿ |

೫. ವಿದ್ಯೆಗೆ ಸಂಬಂಧಿಸಿದ ಪದಗಳು

| | | |
|---|---|---|
| ಬಡಿ | ಬಡಿ | ಶಾಲೆ |
| ಬಲ್ಪಂ | ಬಲಪಂ | ಬಳಪ |
| ಪುಸ್ತಕಂ | ಪುಸ್ತಕಂ | ಪುಸ್ತಕ |
| ಪೆನ್ನು | ಪೆನ್ನು | ಪೆನ್ನು |
| ಪಾಟಮ್ | ಪಾಟಂ | ಪಾಠ |
| ಪರೀಕ್ಷ | ಪರೀಕ್ಷ | ಪರೀಕ್ಷೆ |
| ಪಲಕ | ಪಲಕ | ಫಲಕ |
| ಕಾಪಿ | ಕಾಪಿ | ಕಾಪಿ |
| ಸಾಯಿ | ಸಿರ | ಶಾಯಿ |
| ಗಂಟೆ | ಗಂಟ | ಗಂಟೆ |

೬. ತರಕಾರಿಗೆ ಸಂಬಂಧಿಸಿದ ಪದಗಳು

| | | |
|---|---|---|
| ಭೀಂಡಾ | ಬೆಂಡೆಕಾಯ | ಬೆಂಡೆಕಾಯಿ |
| ಗೋರ್/ಪಳಿ | ಗೊರಕರಕಾಯ | ಚವಳಿಕಾಯಿ |
| ಅಲ್ಲಂ | ಅಲ್ಲಂ | ಅಲ್ಲ, ಹಸಿಶುಂಠಿ |

೭. ವಾಹನಕ್ಕೆ ಸಂಬಂಧಿಸಿದ ಪದಗಳು

| | | |
|---|---|---|
| ಬಂಡಿ | ಬಂಡಿ | ಬಂಡಿ |
| ಸೈಕಿಲ್ | ಸೈಕಿಲಿ | ಸೈಕಲ್ಲು |
| ರಿಕ್ಷಾ | ರಿಕ್ಷಾ | ರಿಕ್ಷಾ |
| ಇಸ್ಕೂಟರ್ | ಸ್ಕೂಟರ್ | ಸ್ಕೂಟರ್ |
| ಆಟೋ | ಆಟೊ | ಆಟೋ |

೮. ವೃತ್ತಿಗೆ ಸಂಬಂಧಿಸಿದ ಪದಗಳು

| | | |
|---|---|---|
| ಊಳಿ | ಊಲಿ | ಕೂಲಿ |
| ಗೂಟಂ | ಗೂಂಟಂ | ಕಂಬ |

| | | |
|---|---|---|
| ರಂಪಮ್ | ರಂಪಂ | ಗರಗಸ |
| ಚಪ್ಪಲ್ | ಚಪ್ಪಲು | ಚಪ್ಪಲು |
| ಓಡಿಯಾ | ವಡ್ಡರ | ವಡ್ಡರ |
| ಪೊಸ್ಟಮಾನ್ | ಪೊಸ್ಟಮಾನು | ಪೊಸ್ಟಮಾನ್ |
| ಕುಂವಾರಿ | ಕುಮ್ಮರಿ | ಕುಮಾರಿ |
| ಇಂಜಿನಿಯರ್ | ಇಂಜಿನಿಯರ್ | ಇಂಜಿನಿಯರ್ |
| ರಾಗಿ | ರಾಗಿ | ರಾಗಿ |
| ವಾಸನ | ವಾಸನ | ವಾಸನೆ |
| ಬಂಡ | ಬಂಡ | ಕಲ್ಲು |

**೯. ರಾಜಕೀಯಕ್ಕೆ ಸಂಬಂಧಿಸಿದ ಪದಗಳು**

| | | |
|---|---|---|
| ನೆಂಬರ್ | ನೆಂಬರ್ | ಸದಸ್ಯ |
| ಸರ್ಪಂಚಿ | ಸರ್ಪಂಚಿ | ಸರಪಂಚ |
| ಎಂ.ಎಲ್.ಎ | ಎಂ.ಎಲ್.ಎ | ಎಂ.ಎಲ್.ಎ |
| ಮುಖ್ಯಮಂತ್ರಿ | ಮುಖ್ಯಮಂತ್ರಿ | ಮುಖ್ಯಮಂತ್ರಿ |
| ಉಪಸರ್ಪಂಚಿ | ಉಪಸರ್ಪಂಚಿ | ಉಪಾಧ್ಯಕ್ಷರು |
| ಅಧ್ಯಕ್ಷ್ಯಕುಟು | ಅಧ್ಯಕ್ಷ್ಯಕುಟು | ಅಧ್ಯಕ್ಷ್ಯರು |
| ಮಂತ್ರಿ | ಮಂತ್ರಿ | ಮಂತ್ರಿ |

**೧೦. ಪ್ರಕೃತಿಗೆ ಸಂಬಂಧಿಸಿದ ಪದಗಳು**

| | | |
|---|---|---|
| ಭೂಕಂಪಂ | ಭೂಕಂಪಂ | ಭೂಂಕಂಪ |
| ಜಗತ್ | ಜಗತ್ | ಜಗತ್ತು |
| ದುಮ್ಮು | ದುಮ್ಮು | ಧೂಳು |
| ನದಿರ್/ಕೊಸಂ | ನದಿತಿರಂ | ನದಿತೀರ |
| ಸಾಂದೆರ್ | ಸಾಯಂತ್ರಲ | ಸಾಯಂಕಾಲ |
| ಚುಕ್ಕ | ಚುಕ್ಕ | ಚುಕ್ಕಿ |

